|| ಶ್ರೀ ||

# ರಾಘಣ್ಣನ ಕಲಿಪ[illegible]

(ಯಾಲಪದ ಛಂದಸ್ಸಿನ ಕನ್ನಡ ಪದ್ಯಕಾವ್ಯ)

(ಧಾರ್ಮಿಕ)


ಬರೆದವರು

ಗಮಕಿ ಎಂ. ರಾಘವೇಂದ್ರರಾವ್

( ಅಂಕಿತ "ರಘುವರ" )





ಪ್ರಕಾಶಕರು .

ಕಾವ್ಯಗಾಯನ ಕಲಾ ಮಂದಿರ

ಬೆಂಗಳೂರು

॥ ಶ್ರೀ ॥

# ರಾಘಣ್ಣನ ಕಲಿಪದ

(ಯಾಲಪದ ಛಂದಸ್ಸಿನ ಕನ್ನಡ ಪದ್ಯಕಾವ್ಯ)

(ಧಾರ್ಮಿಕ)

ಬರೆದವರು .

ಗಮಕಿ ಎಂ. ರಾಘವೇಂದ್ರರಾವ್

( ಅಂಕಿತ ' "ರಘುವರ" )

ಪ್ರಕಾಶಕರು :

ಕಾವ್ಯಗಾಯನ ಕಲಾ ಮಂದಿರ

ಬೆಂಗಳೂರು

"RAGHANNANA KALIPADA" in Yalapada Style written by Gamaki M Raghavendra Rao and Published by Kavya Gayana Kalamandira, 76/41, 11th Main, 14th Cross, Padmanabhanagar, Bangalore-560 070



FIRST EDITION
August 1991/1000 Copies





"This Book is published with the Financial Assistance of Tirumala Tirupathi Devasthanams Trust under their scheme—Aid to Publish Religious Books"




**Price:** Rs. 25/- (Postage extra)

PRINTED AT PRABHA PRINTING HOUSE
22-A, Dr D V Gundappa Road, Basavanagudi, Bangalore-4

## ಸಮರ್ಪಣೆ



ನಿನ್ನ ದಯವೆನ್ನಮೇಲೆ ಚೆನ್ನಾಗಿರುವುದೆಂದು ತಿಳಿದೆ
ಇನ್ನೇನಾಗಬೇಕೊ ಗೋವಿಂದ–ನಾ ಧನ್ಯನಾದೆ
ನಿನ್ನ ದಾಸನೆನಿಸಿ ಮುಕುಂದ

# ಕಲಿಪದ

(ಯಾಲಪದ ಛಂದಸ್ಸಿನ ಕಾವ್ಯ)

ಒಟ್ಟು ಸಂಧಿಗಳು (ಪೀಠಿಕಾ ಸಂಧಿ+53 ಸಂಧಿಗಳು) 54 ಸಂಧಿಗಳು

# ಮುನ್ನುಡಿ

ಶ್ರೀಮಾನ್ ಎಂ ರಾಘವೇಂದ್ರರಾಯರು ಕರ್ನಾಟಕದಲ್ಲಿ ಗಮಕಿಗಳಾಗಿ ಪ್ರಸಿದ್ಧರು, ಪ್ರಶಸ್ತಿ ವಿಜೇತರು ತಮ್ಮ ಕಾಲದ ಹಿರಿಯ ಗಮಕಿಗಳಿಂದ ಅವರು ಗಮಕ ಶಿಕ್ಷಣವನ್ನು ಕ್ರಮಬದ್ಧವಾಗಿ ಪಡೆದುಕೊಂಡವರು, ಕೀರ್ತನ ಗಾಯನ ಸಂಪ್ರದಾಯವನ್ನು ರೂಢಿಸಿಕೊಂಡವರು ಬಿಂದೂರಾಯರು, ಕೃಷ್ಣಗಿರಿ ಕೃಷ್ಣ ರಾಯರು, ಕಳಲೆ ಸಂಪತ್ಕುಮಾರಾಚಾರ್ಯರು ಇಂತಹ ಧೀಮಂತ ಗಮಕಿಗಳ ಒಡನಾಟವಿದ್ದ ಭಾಗ್ಯಶಾಲಿಗಳು ಅವರು, ಅಲ್ಲದೆ ಅವರ ಹಾಗೆಯೇ ಬೆಳೆದು ಕಲೋಪಾಸನೆ ಮಾಡಿದವರು ಗಮಕವನ್ನು ಒಂದು ಪ್ರಾಯೋಗಿಕ ಕಲೆಯನ್ನಾಗಿ ಕನ್ನಡ ನಾಡಿನಲ್ಲಿ ಬಿತ್ತಿ ಬೆಳೆಸಿದ ಮಹನೀಯರ ಪಂಕ್ತಿಯಲ್ಲಿ ಅವರು ಸಹ ಸೇರಿದ್ದಾರೆ ಜೊತೆಗೆ ಗಮಕ ಕಲೆಯ ಲಕ್ಷಣ ವಿಮರ್ಶೆಯನ್ನು ಸಹ ಕೂಲಂಕಷ ವಾಗಿ ನಡೆಸಿ, ಆ ಕಲೆಗೆ ಒಂದು ಶಾಸ್ತ್ರದ ಕಟ್ಟಳೆಯನ್ನು ತರಲು ಶ್ರಮಿಸಿ ಅವರೊಬ್ಬ ಲಾಕ್ಷಣಿಕರೂ ಆಗಿದ್ದಾರೆ ಎನ್ನುವುದನ್ನು ಮರೆಯುವಂತಿಲ್ಲ ಅವರು ರಚಿಸಿರುವ 'ಗಮಕಿ ಪದ್ಯ ಶತಕ', 'ಗಮಕ ಗೀತೆಗಳು', 'ಕಾವ್ಯ ಗಾಯನ ಕಲಾ ಸಂಗ್ರಹ', 'ಗಮಕ ಪ್ರಚಾರ ಬೋಧಿನಿ' ಮೊದಲಾದ ಗ್ರಂಥಗಳನ್ನು ನೋಡಿದರೆ ಅವರ ಪರಿಶ್ರಮವೇನೆಂಬುದು ತಿಳಿಯುತ್ತದೆ. ಮೊದಲು ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕವೂ ಅನಂತರದಲ್ಲಿ ಹಲವು ಗಮಕ ಕಲಾ ಸಂಸ್ಥೆಗಳ ಮೂಲಕವೂ ಈಗ ಕೆಲವು ವರ್ಷಗಳಿಂದ ಕರ್ನಾಟಕ ಗಮಕ ಕಲಾ ಪರಿಷತ್ತು ಎಂಬ ಮಹಾ ಸಂಸ್ಥೆಯ ಮೂಲಕವೂ ಅವರ ಗಮಕ ಕಲೆಯ ಸೇವೆ ನಿರಂತರವಾಗಿ ನಡೆದು ಕೊಂಡು ಬಂದಿದೆ ಕರ್ನಾಟಕ ಗಮಕ ಕಲಾ ಪರಿಷತ್ತು ಹುಟ್ಟಿ, ಬೆಳೆದು, ಬಲ ಗೊಳ್ಳಲು ಅವರು ಪಟ್ಟಿರುವ ಶ್ರಮ ವಿಶೇಷವಾಗಿ ಉಲ್ಲೇಖಿಸಲು ಯೋಗ್ಯವಾದುದು. ಈ ಸಂಸ್ಥೆ ಅವರ ಮೆದುಳಿನ ಮಗು ಎಂಬುದು ನನ್ನ ತಿಳಿವಳಿಕೆ

ಇದು ಒಂದು ಮುಖ ಶ್ರೀಮಾನ್ ರಾಘವೇಂದ್ರರಾಯರು ಕವಿಗಳಾಗಿಯೂ ಸಾಹಿತ್ಯ ಕೃಷಿ ನಡೆಸಿದವರು ಎನ್ನುವುದು ಇನ್ನೊಂದು ಮುಖ ಅವರು ಆಗಾಗ ಬರೆದು ಪ್ರಕಟಿಸಿರುವ ಪದ್ಯ ಗ್ರಂಥಗಳು ಸಾಕಷ್ಟು ಇವೆ 'ಸತ್ಯದೇವ ಚರಿತೆ', 'ವ್ಯಾಸರಾಯ ಮಹಾತ್ಮೆ', 'ಶ್ರೀ ವಾಸುದೇವ ವಿಜಯ', 'ಶ್ರೀ ವೆಂಕಟೇಶ ವಿಜಯ' 'ಶ್ರೀ ಮಧ್ವ ಗೀತೆ', 'ಶ್ರೀ ಆನಂದ ಗೀತೆ', 'ಮೈಸೂರು ಕೋಗಿಲೆ'

ಇವು ಅಂತಹ ಕೆಲವು ಗ್ರಂಥಗಳು. ಅವರ ರಚನೆಗಳಲ್ಲಿ ಪದ್ಯ ಗ್ರಂಥಗಳೇ ಹೆಚ್ಚಿನವು ಎನ್ನುವುದನ್ನು ಲಕ್ಷಿಸಿಗರೆ, ಅವರು ಪ್ರಧಮತಃ ಕವಿತ್ವವನ್ನು ಒಲಿದವರು ಎಂಬುದು ವಿದಿತವಾಗುತ್ತದೆ ಕವಿತ್ವದಲ್ಲಿ ಅವರು ವಿಶೇಷವಾಗಿ ಪ್ರಾಚೀನ ಮಾರ್ಗವನ್ನು ಹಿಡಿದವರು ಎಂಬುದು ಕಾರಣವಾಗಿಯೋ, ಗಮಕಿಗಳಾಗಿ ಅವರು ಗಳಿಸಿರುವ ಖ್ಯಾತಿ ಕಾರಣವಾಗಿಯೋ, ನಮ್ಮ ನಾಡಿನ ಕವಿಗಳ ಗುಂಪಿನಲ್ಲಿ ಅವರು ಹೆಸರು ಅಷ್ಟಾಗಿ ಕೇಳಬರುವುದಿಲ್ಲ. ತಾವು ಕವಿತ್ವ ರಚಿಸುವುದು ತಮ್ಮ ಮನಸ್ಸಿನ ಸಂತೋಷಕ್ಕೆ, ಅನ್ಯರಿಗಾಗಿ ಅಲ್ಲ ಎಂದು ರಾಯರು ಈ ಸಂಬಂಧವಾಗಿ ಉತ್ತರ ಹೇಳಿಯಾರು ಎಂದು ನನಗೆ ತೋರುತ್ತದೆ ಗಮಕದ ಪ್ರಾಣ ಕವಿತ್ವವೇ ಆದುದರಿಂದ ಅದನ್ನು ಅವರು ಹೇಗೂ ಕೈಬಿಡಲಾರರು ಗಮಕಿಗಳಾಗಿ ಅವರ ಒಡನಾಟ ಕವಿತ್ವದೊಂದಿಗೆ ತಪ್ಪುವಂತಿಲ್ಲ ಎಂಬುದರಿಂದಾಗಿ, ಅವರ ಈ ಗೀಳು ಸ್ವಾಭಾವಿಕವೇ ಆಗಿದೆ

ಪ್ರಸ್ತುತ, ಶ್ರೀ ರಾಯರು ತಮ್ಮ 'ರಾಘಣ್ಣನ ಕಲಿಪದ' ಎಂಬ ಯಾಲಪದ ಛಂದಸ್ಸಿನ ಪದ್ಯ ಗ್ರಂಥವನ್ನು ಪ್ರಕಟಿಸುತ್ತಿದ್ದಾರೆ. ಇದೊಂದು ನೀತಿ ಕಾವ್ಯ, ಲೋಕನೀತಿ ಕಾವ್ಯ ಎಂದೇ ಹೇಳಬಹುದು. ಇದರಲ್ಲಿ ೫೩ ಸಂಧಿಗಳೂ ಒಟ್ಟು ೮೮೫ ಪದ್ಯಗಳೂ ಇವೆ ಪ್ರತಿ ಸಂಧಿಗೆ ಅಂತರ್ಗತ ಪದ್ಯಗಳ ಮುಖ್ಯ ವಿಷಯವನ್ನು ಹಿಡಿದು ಶೀರ್ಷಿಕೆಗಳನ್ನು ಕೊಟ್ಟಿದೆ. ಸಂಧಿಗಳ ವಿಷಯಾನುಕ್ರಮಣಿಕೆಯಲ್ಲಿ ವಸ್ತು ವಿಸ್ತಾರದ ಗಾತ್ರ ಇಲ್ಲವೆ, ಬೆಳವಣಿಗೆಯ ದೃಷ್ಟಿಯಿಂದ ಅಂತಹ ಕಟ್ಟುನಿಟ್ಟಾದ ವ್ಯವಸ್ಥೆಯೇನೂ ಇಲ್ಲ, ಪದ್ಯಗಳ ನಿರ್ವಾಹವೂ ವಿರಳವಾಗಿ ಹೊರತು ಯಾವುದೇ ಗೊತ್ತುಪಾಡಿಗೆ ಒಳಪಟ್ಟಿಲ್ಲ, ಮುದ್ರಿಕೆಯನ್ನೇನೂ ಬಳಸಿಲ್ಲ. ಆದರಿಂದ ಈ ರಚನೆ ಒಂದು ಸ್ವತಂತ್ರ ಪದ್ಯಲಹರಿಯೆಂದು ತಿಳಿಯುವಂತಿದೆ

ಈ ಪದ್ಯ ಗ್ರಂಥದ ವಸ್ತು ಮುಖ್ಯವಾಗಿ ಮಾನವ ವ್ಯಕ್ತಿ ಮತ್ತು ಮನುಷ್ಯ ಪ್ರಕೃತಿ, ಯಾವುದೇ ಪುರಾಣೇತಿಹಾಸಗಳಿಗೆ, ಕಥೆಗೆ, ಕಾವ್ಯ ಗ್ರಂಥಗಳಿಗೆ ಸಂಬಂಧಿಸಿದುದಲ್ಲ, ಮಹಾಪುರುಷರ ಚರಿತ್ರೆಯಾಗಲಿ ಗತ ಇತಿಹಾಸದ ನಿರೂಪಣೆ ಯಾಗಲಿ ಅಲ್ಲ ನಮ್ಮ ದೇಶದ ಜನಪದರು ಒಂದು ಕಾಲಕ್ಕೆ ರೂಢಿಸಿಕೊಂಡು ಬೆಳಸಿದ, ಬೆಳಗಿದ ಆಚಾರ ವಿಚಾರಗಳ ಸಮಷ್ಟಿಯೇ ಇಲ್ಲಿಯ ವಿಷಯಪುಷ್ಟಿ. ಅವರು ಹಾಗೆ ಬೆಳಸಿ ಬೆಳಗಿದ ದೈವಶ್ರದ್ಧೆ ಧರ್ಮಶ್ರದ್ಧೆಗಳು, ಆಚಾರ ವಿಚಾರಗಳು ಈಗ ಹೇಗೆ ಮರೆತುಹೋಗಿವೆ, ಮೂಲೆಗುಂಪಾಗಿವೆ, ಕಳಾಹೀನವಾಗಿ

ಅಧಃಪಾತಕ್ಕೆ ಇಳಿದಿವೆ ಎಂಬುದನ್ನು ಮನವರಿಕೆ ಮಾಡಿಕೊಡುವ ಪ್ರಾಮಾಣಿಕ ಪ್ರಯತ್ನ ಇಲ್ಲಿ ಕಂಡುಬರುತ್ತದೆ. ಹಾಗಾಗಿ ಈ ಗ್ರಂಥ ಬಹುಭಾಗದಲ್ಲಿ ಒಂದು ದೇಶಸ್ಥಿತಿ ವಿಷನ್ನತೆಯ ವಿಷಾದ ಗೀತೆ ಕರ್ತೃ 'ಕಲಿಪದ' ಎಂದರೆ ಏನೆಂದು ತಿಳಿಸುವ ಹಲವು ವ್ಯಾಖ್ಯೆಗಳಲ್ಲಿ, ಸಂಗರ್ಭಕ್ಕೆ ಚೆನ್ನಾಗಿ ಒಪ್ಪುವುದು ಎಂದರೆ, "ಕಲಿಯುಗದ ಪದಗಳು" ಎಂಬುದೇ ಆಗಿದೆ ಕಲಿಯುಗದ ಚರಿತ್ರೆ, ಎಂದರೆ ನಡೆವಳಿಕೆ, ಎಂದೂ ಸಿಂದ್ಯವೆಂದೇ ನಮ್ಮ ಹಿರಿಯರ ಮಾತು.

ನಮ್ಮ ಸುತ್ತಣ ಸಮಾಜ ತನ್ನ ಒಳಿತನ್ನು ತಾನು ಸಾಧಿಸಿಕೊಳ್ಳಲು ಈ ಮೊದಲು ಯಾವ ನಂಬುಗೆಗಳನ್ನು ಹಿಡಿಯಿತೋ ಯಾವ ಕಟ್ಟುಪಾಡುಗಳನ್ನು ಮಾಡಿಕೊಂಡಿತೋ, ಅವನ್ನೆಲ್ಲ ಅದ್ಯತನ ಸಮಾಜ ಹೇಗೆ ನಿರ್ಮಮವಾಗಿ ಕಳಚಿ ಕೊಂಡು ಅನಾಥವಾಗುತ್ತಿದೆ ಎಂಬುದರ ವಿಕಾಸಪೂರ್ಣ ಚಿತ್ರಗಳು ಇಲ್ಲಿ ದೊರೆಯುತ್ತವೆ ಆ ನಂಬುಗೆಗಳು, ದೈವಭಕ್ತಿ ಧರ್ಮಶ್ರದ್ಧೆಗಳು ಮೂಲವಾದವು, ಸಮುಚಿತ ಆಚಾರ ವಿಚಾರಗಳ ರೂಪದವು ದೇವರ ಅಸ್ತಿತ್ವದಲ್ಲಿ ಹಾಗೂ ಶಕ್ತಿ ಯಲ್ಲಿ ನಂಬುಗೆ, ಗುರು ಹಿರಿಯರಲ್ಲಿ ಗೌರವ, ಕುಟುಂಬದ ಸದಸ್ಯರಲ್ಲಿ ಪ್ರೀತಿ ವಿಶ್ವಾಸಗಳು, ಚಿಕ್ಕವರ ದೊಡ್ಡವರ ನಡುವೆ ತಾರತಮ್ಯ, ಲೋಕ ವ್ಯವಹಾರದಲ್ಲಿ ಸತ್ಯಸಂಧತೆ ನ್ಯಾಯಪರತೆಗಳು, ವೃತ್ತಿಯಲ್ಲಿ ಶ್ರದ್ಧೆ ಮತ್ತು ಕರ್ತವ್ಯಪರತೆ, ತಾಳ್ಮೆ, ಅಲ್ಪತೃಪ್ತಿ, ಸಮಾಧಾನ ಗುಣ, ಋಣಬಾಧಾ ಭೀತಿ ಮುಂತಾದ ಗುಣ ವಿಶೇಷ ಗಳು ನಮ್ಮ ಹಳೆಯ ತಲೆಮಾರಿನ ಜನರಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿದ್ದು, ಬರುಬರುತ್ತ ನಿಸ್ಸತ್ವಗೊಂಡಿವೆ, ಅಳಿಸಿಹೋಗುತ್ತಿವೆ ಎನ್ನುವುದು ಈ ಪದ್ಯ ಕಾವ್ಯದ ಕರ್ತೃಗಳನ್ನು ಬಹುವಾಗಿ ಕಾಡಿವೆ. ಆ ತಲೆಮಾರಿನ ಜನರೊಂದಿಗೆ ಹುಟ್ಟಿ ಬೆಳೆದ ಕಾರಣ ಅವರಿಗೆ ಈ ಕೊರಗು ಸ್ವಾಭಾವಿಕವೇ ಆಗಿದೆ ಕೊರಗು ಆತಂಕಕ್ಕೆ, ಆತಂಕವು ಆಗ್ರಹಕ್ಕೆ ಅವಕಾಶ ಮಾಡಿ, ತತ್ಫಲವಾಗಿ ಈ ನೀತಿ ಗ್ರಂಥ ಹುಟ್ಟುವಂತಾಗಿದೆ

ಹಳೆಯ ಪೀಳಿಗೆಯ ಜನರು ರೂಢಿಸಿ ಪೋಷಿಸಿದ್ದ ಮೌಲ್ಯಗಳ ಸ್ಥಾನದಲ್ಲಿ ಇಂದು ಉಚ್ಛೃಂಖಲ ವೃತ್ತಿ, ಭೋಗಾಸಕ್ತಿ, ಅನೀತಿ ಅನಾಚಾರಗಳು, ಮರೆ ಮೋಸಗಳು, ಕ್ಷುದ್ರ ಮನೋರಂಜನೆಯ ಮೋಹ, ಸಾಲದ ಹಣದ ಆಸೆ, ಜೀವನ ನಿರ್ವಹಣೆಯ ಕ್ಲೇಶ ಕಾರ್ಪಣ್ಯಗಳು, ವೃತ್ತಿ ಜೀವನದಲ್ಲಿ ಅಸಡ್ಡೆ ಮುಂತಾದವು ಹಿಂಡುಹಿಂಡಾಗಿ ದಾಳಿಯಿಟ್ಟಿರುವುದನ್ನು ರಾಯರು ಕಂಡು ಕೊರಗಿದ್ದಾರೆ,

ಮರುಗಿದ್ದಾರೆ ಆದರೆ ಎಲ್ಲ ಅಂಧಕಾರಮಯವೆಂಬ ಅಸಹಾಯಕತೆಯನ್ನು ಅವರು ಮುಂದೆ ಮಾಡುವುದಿಲ್ಲ , ಈಗಲೂ ಒಳ್ಳೆಯ ಜನರಿದ್ದಾರೆ, ಮೌಲ್ಯಗಳ ಅನುಸಂಧಾನವಿದೆ ಎಂಬ ನಿರೀಕ್ಷೆಯನ್ನು ಪ್ರಕಟಿಸಿದ್ದಾರೆ ಭವಿಷ್ಯದಲ್ಲಿ ಅಂತಹ ಭರವಸೆಯನ್ನು ಎಂದೂ ಯಾರೂ ಬಿಟ್ಟುಕೊಡುವ ಹಾಗಿಲ್ಲ ನಿರಾಶಾವಾದದಲ್ಲಿಯೇ ಮುಳುಗಿ ಮುಂಗಾಣದೆ ಹೋಗುವುದು ಯಾರಿಗೂ ಪಥ್ಯವಾಗುವ ಮನಃಸ್ಥಿತಿಯಲ್ಲ ಆದುದರಿಂದ ರಾಯರಂತೆ ಕತ್ತಲಲ್ಲಿ ಬೆಳಕಿನ ಕಿರಣಗಳಿಗೆ ಹಂಬಲಿಸುವುದರಲ್ಲಿ ಅರ್ಥವಿದ

ಪದ್ಯ ಪಂಕ್ತಿಗಳ ಮೂಲಕ ನೀತಿ ಬೋಧೆ ಮಾಡುವುದು ನಮ್ಮ ಭಾಷೆಯಲ್ಲಿ ಎಂದಿನಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ ಆ ಪದ್ಧತಿಯನ್ನು ಚೆನ್ನಾಗಿ ಬಲ್ಲ ರಾಯರು ತಮಗೆ ಮೆಚ್ಚಿದ ಒಂದು ಛಂದಸ್ಸನ್ನು ಆಯ್ದುಕೊಂಡು, ಅದರಲ್ಲಿ ನೀತಿಯ ನಿಲುವೆಯನ್ನು ತಮಗೆ ತೃಪ್ತಿಯಾಗುವ ಹಾಗೆ ನಿರೂಪಿಸಿದ್ದಾರೆ ನಾಡಿನ ಜನರ ಏಳಿಗೆಯ ವಿಷಯದಲ್ಲಿ ಉತ್ಸುಕರಾದ ಕಲಾವಿದರೂ ಸಾಹಿತಿಗಳೂ ಅವಶ್ಯವಾಗಿ ಮಾಡಬೇಕಾದ ಕರ್ತವ್ಯವೇ ಇದು "ಹಿತವ ಬೋಧಿಸುವ ಹಿರಿಯ, ಪಥವ ತೋರಿಸುವ ಗುರು । ಮತಿಯನೆಚ್ಚರಿಪ ಕಬ್ಬಿಗ ॥" ಇವರು ಲೋಕವಂದ್ಯರೆಂದು ಅವರೇ ನೆನೆದಿದ್ದಾರೆ (೧೨-೧) ಒಂದು ಕಾಲದಲ್ಲಿ, ಬಾಲ ಶಿಕ್ಷಣದಲ್ಲಿ ಅವಶ್ಯವಾಗಿ ಅಳವಡಿಸಿರುತ್ತಿದ್ದ ನೀತಿಪಾಠ ಎನ್ನುವುದು ಈಗ ನಷ್ಟಪ್ರಾಯವಾಗಿರುವಾಗ, ಈ ಬಗೆಯ ನೀತಿ ಕಾವ್ಯಗಳು ಆ ನಷ್ಟವನ್ನು ತುಂಬಬೇಕಾಗುತ್ತದೆ ರಾಯರ ಕೆಲಸ ಅಂತಹ ಒಳ್ಳೆಯ ಕೆಲಸ

ಈ ಕೃತಿಯಲ್ಲಿ ಏನೇನು ವಿಷಯಗಳು ಬಂದಿವೆ ಎಂದು ಇಲ್ಲಿ ನಿರೂಪಿಸುವ ಅಗತ್ಯವಿಲ್ಲ ಒಳ್ಳೆಯ ಬದುಕಿಗೆ ಬೇಕಾದ ಎಲ್ಲ ತಿಳಿವಳಿಕೆಯ ಮಾತುಗಳೂ ಇಲ್ಲಿವೆ, ಹಳೆಯ ಧರ್ಮಪಂಥಗಳ ಹಾಗೂ ಆಚಾರ್ಯರ ವಿಚಾರ ಸಾರವಿದೆ; ಸದಸದ್ವಿವೇಕದ ಎಚ್ಚರದ ನುಡಿಗಳಿವೆ , ಮೌಲ್ಯಗಳ ವಿಚಾರವಿದೆ , ಸ್ವಾನುಭವದ ಸೂಕ್ತಿಗಳಿವೆ , ಆತ್ಮಾವಲೋಕನವೂ ಪರೋಪದೇಶ ಪಾಂಡಿತ್ಯವೂ ಒಗ್ಗೂಡಿವೆ ಇವುಗಳ ನಿರ್ವಹಣೆ ತುಂಬ ಸರಳ, ಸರಸ ಎನ್ನುವಂತಿರುವುದರಿಂದ, ಸಣ್ಣ ಮಕ್ಕಳು ಮೊದಲುಗೊಂಡು ಮುತ್ತಮುದುಕರವರೆಗೆ ಎಲ್ಲರೂ ಇದರ ಪ್ರಯೋಜನವನ್ನು ಪಡೆಯಬಹುದಾಗಿದೆ "ಗೀಚುತಿರುವೆನೆನ್ನ ಮನಕೆ ತೋಚಿದಂತೆ ವಿಷಯಗಳ"

ಎಂದು ರಾಯರು ತಿಳಿಸಿದ್ದರೂ, ಇವು ವಿಚಾರಪರ ಚೇತನವೊಂದರ ಚಿಂತನಬಿಂದು ಗಳಾಗಿ ಇಲ್ಲಿ ಹಸಿದಿವೆಯೆಂದು ಹೇಳಬಹುದು

ಇವುಗಳ ಭಾಷೆ ಶೈಲಿ ಛಂದಸ್ಸುಗಳ ಬಗೆಗೆ ಇಲ್ಲಿ ಹೆಚ್ಚು ಹೇಳುವ ಅಗತ್ಯ ವಿಲ್ಲ ಇಲ್ಲಿ ಕಾವ್ಯಗುಣ ಹೊಳೆಯುವ ರಚನೆಗಳಿವೆ , ಕಾವ್ಯ ಸತ್ತ್ವ ಹೊಮ್ಮ ದಿರುವ ರಚನೆಗಳೂ ಇವೆ. ನೊಗಸಾದ ಸೂಕ್ತಿಗಳ ಹಾಗೆಯೇ ತೀರ ಸಾಮಾನ್ಯ ವೆಂಬ ಸೂಕ್ತಿಗಳೂ ಇವೆ , ಪುನರುಕ್ತಿಗಳು ಸಹ ಇವೆ ಇವನ್ನು ಅನ್ಯ ಸೂಕ್ತಿಕಾರ ಸಾಹಿತಿಗಳ ರಚನೆಗಳೊಂದಿಗೆ ಹೋಲಿಸಿದರೆ, ಸಕ್ಕರೆಯ, ಗೋಲಿಗಳಂತಹ ಸವಿ ಮಾತುಗಳೇನೆ , ಉಪ್ಪು ಹುಳಿ ಕಾಣದ ಸಪ್ಪೆ ಮಾತುಗಳೂ ಇವ ಬಂಧಗುಣದ ದೃಷ್ಟಿಯಿಂದ ಭಾಷೆ ಶೈಲಿಗಳು ಅಲ್ಲಿ ಇಲ್ಲಿ ಕೊಂಚ ಶಿಥಿಲ ಎಂದು ತೋರಿದರೂ, ಉದಾತ್ತ ಆಶಯಗಳ ದೃಷ್ಟಿಯಿಂದ ಇಲ್ಲಿಯ ಸೂಕ್ತಿಗಳು ಸಂಗ್ರಹ ಯೋಗ್ಯವೇ ಆಗಿವೆ

ಕೃತಿ ಯಾಲಪದವೆಂಬ ಛಂದಸ್ಸಿನಲ್ಲಿದೆಯೆಂಬ್ರು ಕೃತಿಕರ್ತರು ಮೊದಲೇ ಸ್ಪಷ್ಟಪಡಿಸಿದ್ದಾರೆ ಅದರ ಸ್ವರೂಪವನ್ನು 'ಕನ್ನಡ ಕೈಪಿಡಿ'ಯನ್ನು ಲಕ್ಷಿಸಿ ಅವರು ಗ್ರಹಿಸಿರುವಂತೆ ತೋರುತ್ತದೆ ಹಾಡಿಕೆಗೆ ತ್ರಿಪದಿ ಸಾಂಗತ್ಯಗಳಿಗಿಂತ ಇದು ಚೆನ್ನಾದುದೆಂದು ಅವರ ಗ್ರಹಿಕೆ ಕನ್ನಡಕ್ಕೆ ಸೊಗಸಿದ ಈ ಜನಪದದ ಮಟ್ಟು ನೀತಿಬೋಧೆಯ ಮಾತುಗಳನ್ನು ಹೇಳುವುದಕ್ಕೆ ಯೋಗ್ಯವಾದುದೆಂದು ಅದಕ್ಕೆ ಅವರು ಪ್ರಾಶಸ್ತ್ಯ ಕೊಟ್ಟಿದ್ದಾರೆ ಯಾಲಪದವನ್ನು ಹಾಡಿದರೆ, ಅದು ಉಯ್ಯಾಲೆ ತೂಗಿದಂತೆ ಇರುವುದೆಂದೂ ಲಾಲಿ ಹೇಳಿದಂತೆ ಇರುವುದೆಂದೂ ಅವರು ಮೆಚ್ಚುಗೆಯ ಮಾತನ್ನು ನುಡಿದಿದ್ದಾರೆ ರಾಘವೇಂದ್ರರಾಯರು ಗಮಕಿಗಳಾದುದರಿಂದ ಅವರು ಹೇಳಿರುವ ಮನ್ನಣೆಯ ಮಾತುಗಳಲ್ಲಿ ಹುರುಳಿಲ್ಲವೆಂದು ಹೇಳುವುದು ಶಕ್ಯವಿಲ್ಲ. ಅವರು ಸ್ವತಃ ಸರಸವಾಗಿ, ಆಕರ್ಷಕವಾಗಿ ಇವನ್ನು ಹಾಡಿ ತೋರಿಸಬಲ್ಲರು ಪ್ರಾಚೀನ ಯಕ್ಷಗಾನ ಕೃತಿಗಳಲ್ಲಿ ವಿರಳವಾಗಿ ಕಂಡುಬರುವ ಈ ಬ್ರಹ್ಮ-ರುದ್ರ ಗಣ ಪರ್ಯಾಯಗಳ ದೇಸಿ ಮಟ್ಟು ಯಾವ ರಾಗದಲ್ಲಿ ಬೇಕಾದರೂ ಹಾಡ ಬಹುದಾದುದು ಎಂದು ಬಲ್ಲವರು ಹೇಳುತ್ತಾರೆ ಸ್ನಿಗ್ಧ ಲೋಲ ಲಕ್ಷಣದ ಈ ಬಂಧವನ್ನು ಗಣನಿಯಮಾನುಸಾರವಾಗಿ ಪ್ರಸ್ತಾರಿಸಿದರೆ ಹೇಗಿರಬಹುದೆಂದು ತಿಳಿಯಲು ರಾಯರು ತಮ್ಮ ನಿವೇದನೆಯಲ್ಲಿ ಮಾದರಿಗಳನ್ನು ಉದಾಹರಿಸಿದ್ದರೆ ಚೆನ್ನಾಗಿರುತ್ತಿದ್ದಿತು ಮಾತ್ರಾಲಯ ಗತಿಗೆ ಒಗ್ಗಿರುವ ಆಧುನಿಕ ವಾಚನ

ಪದ್ಧತಿಯ ಸಹೃದಯರಿಗೆ ಇಂತಹ ಮಾರ್ಗದರ್ಶನ ಅತ್ಯವಶ್ಯವೆಂದು ಹೇಳಬೇಕಾಗಿದೆ

ಕವಿಗಳಾಗಿ, ಗಮಕಿಗಳಾಗಿ ಖ್ಯಾತರಾಗಿರುವ ರಾಘವೇಂದ್ರರಾಯರು ಈಗ ಪ್ರಚುರವಾಗುತ್ತಿರುವ ಪದ್ಯ ಗ್ರಂಥದ ಮೂಲಕ ಒಬ್ಬ ಸೂಕ್ತಿಕಾರರಾಗಿಯೂ—ಸುಭಾಷಿತಕಾರರಾಗಿಯೂ—ಬೆಳಕಿಗೆ ಬಂದಿರುವುದು ಮೆಚ್ಚತಕ್ಕ ಸಂಗತಿ ಅವರಿಗೆ ನನ್ನ ಅಭಿನಂದನೆಯನ್ನು ಸಲ್ಲಿಸುತ್ತೇನೆ ಅವರು ಇನ್ನೂ ಹೆಚ್ಚು ಕಾಲ ಕನ್ನಡ ಭಾಷೆಯ ಸೇವೆಯನ್ನು ಸಲ್ಲಿಸುವಂತಾಗಲಿ ಎಂಬುದಾಗಿ ಹಾರೈಸುತ್ತೇನೆ

ಮೈಸೂರು
೮-೭-೧೯೯೧

ತಿ. ವಿ. ವೆಂಕಟಾಚಲ ಶಾಸ್ತ್ರೀ

# ರಾಘಣ್ಣನ ಕಲಿಪದ

## ನಿವೇದನೆ

ಗಂಗಾವತಿಯಲ್ಲಿರುವ ನನ್ನ ಮಿತ್ರರಾದ ಶ್ರೀ ಜಯರಾಮಾಚಾರ್ ಸರ ಜೋಷಿ ಅವರು ಒಮ್ಮೆ ಬೆಂಗಳೂರಿಗೆ ಬಂದಿದ್ದಾಗ ೧೯೬೬ ರಲ್ಲಿ ನಡೆದ ಶ್ರೀ ವ್ಯಾಸ ರಾಯರ ಪುಣ್ಯ ದಿನಕ್ಕೆ ನನಗೆ ನವ ವೃಂದಾವನಕ್ಕೆ ಬರಲು ಆಹ್ವಾನವಿತ್ತರು ಇದಕ್ಕೆ ನಾನು ಒಪ್ಪಿ ನನ್ನ ಹಿರಿಯ ಮಿತ್ರರೂ ಕವಿಗಳೂ ಕತೆಗಾರರೂ ಆಗಿದ್ದ ದಿವಂಗತ ಶ್ರೀ ಕೆ ಗೋಪಾಲಕೃಷ್ಣರಾಯರ ಜೊತೆಯಲ್ಲಿ "ನವ ವೃಂದಾವನ"ಕ್ಕೆ (ಹೊಸಪೇಟೆ–ಪಾಪೆ–ಆನೆಗೊಂದಿ–ನವ ವೃಂದಾವನ) ಹೋಗಿ ಗುರುಗಳ ದರ್ಶನ ಮಾಡಿ ಬಂದೆನು

ಅಲ್ಲಿಂದ ಮುಂದೆ ನನ್ನ ಮನಸ್ಸಿಗೆ ಪ್ರೇರಣೆಯಾಗಿ ಈ ಆಶುಕವಿತೆಯನ್ನು ಬರೆದೆನು ಕಾಲಕ್ರಮದಲ್ಲಿ ಈ ಕಾವ್ಯಕ್ಕೆ ಸಾಂದರ್ಭಿಕವಾಗಿ ಇನ್ನೂ ಕೆಲವು ಪದ್ಯಗಳು ಸೇರಿಕೊಂಡು ಈಗ ಕಾಣುವ ರೂಪವನ್ನು ಈ ಗ್ರಂಥವು ತಾಳಿದ !

ನಮ್ಮ ದೇಶ, ಜನ, ಸಮಾಜ ಚೆನ್ನಾಗಿ ಬದುಕಿ ಬಾಳಿ ಕೀರ್ತಿ ಪಡೆಯು ವಂತಾಗಲೆಂಬ ಸದ್ಭಾವನೆಯಿಂದ ಬರೆದ ಆಶುಕವಿತೆಯಿದಾಗಿದೆ. ಇದು ಯಾಲ ಪದದ ಛಂದಸ್ಸಿನಲ್ಲಿದ

"ಯಾಲಪದ"ವು ಕನ್ನಡ ಜನಪದ ಸಾಹಿತ್ಯದ ಜನಪ್ರಿಯ ಹಾಡುಗಬ್ಬ ಗಳೆನಿಸಿದ ತ್ರಿಪದಿ–ಸಾಂಗತ್ಯಗಳಂತೆಯೇ ಒಂದು ಮನೋಹರವಾದ ಓಟದಿಂದ ಕೂಡಿ, ಕೇಳಲೂ, ಅರ್ಥಮಾಡಿಕೊಳ್ಳಲೂ ಮತ್ತು ಹೃದಯಂಗಮವಾಗಿ ಹಾಡಲೂ ಅನುಕೂಲವಾಗಿರುತ್ತದ ಇದರ ರಚನೆಯ ಬಗೆಗೆ ಕನ್ನಡ ಕೈಪಿಡಿಯಲ್ಲಿ ಹೀಗೆ ಹೇಳಲಾಗಿದೆ —ಹಳೆಯ "ಯಕ್ಷಗಾನ ಗ್ರಂಥಗಳಲ್ಲಿ 'ಯಾಲಪದ'ವೆಂಬುದೊಂದು ಸಿಕ್ಕುತ್ತದೆ ಇದರಲ್ಲಿ (ಮಾತ್ರಾ ದೃಷ್ಟಿಯೂ ಸೇರಿ) ಆರು ರುದ್ರ ಗಣಗಳೂ ಕೊನೆಯಲ್ಲಿ ಒಂದು ದೀರ್ಘವೂ ಇದ್ದಂತಿದೆ ಆಮೇಲೆ ಪಾದ ಹೆಚ್ಚಿ, ಒಂದು ಗಣ ಕೊನೆಯ ಪಾದಕ್ಕೆ ಸೇರಿ, ಕೊನೆಯ ಪಾದ ಪುನರಾವರ್ತಿಯಾಗಿದೆ ಇದು 'ಏಳೆ'ಯ ರೂಪಾಂತರವಾಗಿದ್ದಲ್ಲಿ–ಏಳೆಗೆ ಆರು ರುದ್ರ ಗಣ+ಒಂದು ಗುರು ಎಂದು ಲಕ್ಷಣ ಹೇಳಬೇಕಾಗುತ್ತದೆ ಅಲ್ಲಲ್ಲಿ ರುದ್ರಕ್ಕೆ ವಿಷ್ಣು ಬ್ರಹ್ಮ ಗಣಗಳು ಪರ್ಯಾಯವಾಗಿ ಬರಬಹುದು !"

ಖಾದ್ರಿ ನರಹರಿ ಕವಿ ವಿರಚಿತ ಹನುಮದ್ವಿಲಾಸ, ಕುಚೇಲೋಪಾಖ್ಯಾನ ಮತ್ತು ಕಾಳಿಂಗಮರ್ದನ ಎಂಬ ಈ ಮೂರು ಯಕ್ಷಗಾನ ಚಂಪೂ ಕಾವ್ಯಗಳ ಪೈಕಿ ಕುಚೇಲೋಪಾಖ್ಯಾನದಲ್ಲಿ ಕವಿಯು ಬಳಸಿರುವ "ಯಾಲಪದ" ಛಂದಸ್ಸಿನ ಹಲವು ಪದ್ಯಗಳು ಅವುಗಳ ಶೈಲಿ ನನ್ನ ಮನಸ್ಸಿಗೆ ಬಹಳವಾಗಿ ಹಿಡಿಸಿತು , ಮತ್ತು ಈ ಛಂದಸ್ಸಿನಲ್ಲಿ ಒಂದು ಪದ್ಯ ಗ್ರಂಥವನ್ನು ಬರೆಯಬೇಕೆಂಬ ಆಸಯೂ ಬೆಳೆಯಿತು. ಕಾಲ ಕರ್ಮ ಸಂಯೋಗದ ಫಲವಾಗಿ ಈ ನನ್ನ ಅಪೇಕ್ಷೆಯು ಆ ಜಗತ್ಪ್ರಭುವಿನ ಪ್ರೇರಣೆಯಿಂದ ಪೂರೈಸಿತು. ಎಲ್ಲವೂ ಅವನ ಇಚ್ಛೆ !

ಭಾರತ ಭೂಮಿಯಲ್ಲಿ ತಲತಲಾಂತರವಾಗಿ ನಮ್ಮ ಜನಸಾಮಾನ್ಯರು ಹಳ್ಳಿ ಮತ್ತು ಪಟ್ಟಣಗಳಲ್ಲಿ ಭಾರತ ರಾಮಾಯಣ ಮುಂತಾದ ಕಾವ್ಯಗಳನ್ನು ಶ್ರವಣ ಮಾಡಿ, ಅದರ ನತ್ಪರಿಣಾಮವೇ ನಮ್ಮ ಸಂಸ್ಕೃತಿಯನ್ನು ಇದುವರೆಗೆ ಉಳಿಸಲು ಕಾರಣವಾಯಿತು ಕೇವಲ ಜ್ಞಾನಾರ್ಜನೆಗಿಂತಲೂ ನಮ್ಮ ಜನಸಾಮಾನ್ಯರು ಸಹೃದಯರಾಗಿ ಅವರಲ್ಲಿ ದೈವಭಕ್ತಿ, ಜೀವಕಾರುಣ್ಯ, ಪಾಪ ಭೀತಿ, ಧರ್ಮ ಬುದ್ಧಿ, ನಯ, ನೀತಿ ಮುಂತಾದ ಸದ್ಗುಣಗಳು ಬಳಯಬೇಕಾದುದು ಇಂದು ಅತ್ಯಗತ್ಯವಾಗಿದೆ , ಅಲ್ಲದೇ ಈ ಸದ್ಗುಣಗಳೇ ವ್ಯಕ್ತಿಗೂ ಸಮಾಜಕ್ಕೂ ಮುಖ್ಯ ವಾಗಿ ಬೇಕಾದವು ಮತ್ತು ಶ್ರೇಯಸ್ಸನ್ನು ತರುವುವು

ಈ ದೃಷ್ಟಿಯಿಂದಲೇ ವಾಚಕರು ಈ ಪದ್ಯ ಕಾವ್ಯವನ್ನು ಅವಲೋಕಿಸ ಬೇಕೆಂದು ನನ್ನ ಪ್ರಾರ್ಥನೆ ಇದು ಕಾವ್ಯವಲ್ಲದಿದ್ದರೂ ಇಂದಿನ ನಮ್ಮ ನಾಡು-ನುಡಿ ಮತ್ತು ಜನರ ಚಿತ್ರಗಳನ್ನು ನೀಡುವಲ್ಲಿ ಕಾವ್ಯದಲ್ಲಿ ನಾವು ಕಾಣುವ ಹಲವು ಗುಣಗಳು ಇಲ್ಲಿಯೂ ಕಂಡುಬರುತ್ತವೆ ಇದೊಂದು ಹೊಸ ಪ್ರಯೋಗ. ಯಾಲಪದ ಛಂದಸ್ಸಿನಲ್ಲಿ ಈ ಹಿಂದೆ ಪ್ರತ್ಯೇಕವಾದ ಯಾವ ಕಾವ್ಯ ರಚಿತವಾಗಿದೆಯೋ ನನಗೆ ತಿಳಿಯದು ! ಆದರೆ ಇದರ ಶೈಲಿಯು ನಮ್ಮ ಜನಪದ ಸಾಹಿತ್ಯಕ್ಕೆ ಹಿಂದಿನಿಂದಲೂ ಹೊಂದಿಕೊಂಡು ಬಂದಿರುವ ಒಂದು ಪದ್ಯ ಜಾತಿ ವಿಮರ್ಶಕರು ಈ ನನ್ನ ಅಭಿಪ್ರಾಯವನ್ನು ಪರಾಮರ್ಶಿಸಬಹುದಾಗಿದೆ

ಗಮಕಿ ಎಂ ರಾಘವೇಂದ್ರರಾವ್
ಕಾವ್ಯಗಾಯನ ಕಲಾಮಂದಿರ
ನಂ 198, "ಕೇಶವ ಕೃಪಾ"
ಫೂಟೀನ್ ಸ್ಟೇಷನ್ ರಸ್ತೆ
ತ್ಯಾಗರಾಜನಗರ, ಬೆಂಗಳೂರು-28

# ಕೃತಜ್ಞತೆ

(1) "ಕಲಿಪದ"ವನ್ನು ಅಚ್ಚು ಮಾಡಿಸುವ ವಿಚಾರದಲ್ಲಿ ನನ್ನ ಪರಮ ಮಿತ್ರರಾದ ವಿದ್ವಾನ್ ಶ್ರೀ ಆದ್ಯ ರಾಮಾಚಾರ್ಯರಲ್ಲಿ ನಾನು ಪ್ರಸ್ತಾಪಿಸಿದ. ಅವರು ನನ್ನ ಈ ಆಲೋಚನೆಗೆ ಒಪ್ಪಿ, ಈ ಗ್ರಂಥದ ಪ್ರಕಟಣೆಗೆ ಆರ್ಥಿಕ ಸಹಾಯ ನೀಡುವಂತೆ ಇದರ ಬಗ್ಗೆ ತಮ್ಮ ಅಭಿಪ್ರಾಯ ಪತ್ರವನ್ನು ನೀಡಿ, ಇದನ್ನು "ತಿರುಮಲ ತಿರುಪತಿ ದೇವಸ್ಥಾನಗಳ ಟ್ರಸ್ಟಿನ ಸಂಪಾದಕ"ರಿಗೆ ಕಳಿಸುವಂತೆ ನನಗೆ ಸೂಚಿಸಿದರು. ನಾನು ದಿನಾಂಕ 23–4–1990 ರಲ್ಲಿ ಈ ಗ್ರಂಥವನ್ನು ನಿಗದಿತ ಅರ್ಜಿಯೊಡನೆ ಸಂಪಾದಕರಿಗೆ ಕಳಿಸಿಕೊಟ್ಟೆ, ಅವರಿಂದ ದಿನಾಂಕ 25–3–1991 ರಲ್ಲಿ ಈ ಗ್ರಂಥದ ಪ್ರಕಟಣೆಗೆ ಆರ್ಥಿಕ ಸಹಾಯ ಒದಗಿಸಲಾಗುವುದೆಂಬ ಆದೇಶ ಪತ್ರ ಬಂದಿತು "ತಿರುಪತಿ ತಿಮ್ಮಪ್ಪನ ದಯ" (ಟಿ.ಟಿ.ಡಿ.) ನನ್ನಮೇಲಿದೆ ಯೆಂಬುದು ಇದರಿಂದ ನನಗೆ ತಿಳಿದು ಸಂತೋಷವಾಯಿತು ಹೀಗೆ ಈ ಪದ್ಯ ಗ್ರಂಥವು ಈಗ ಬೆಳಕಿಗೆ ಬರಲು ಕಾರಣವಾಯಿತು. ಈ ಕಾರ್ಯದಲ್ಲಿ ನನಗೆ ಸಹಾಯ ಮಾಡಿದ ಮೇಲೆ ತಿಳಿಸಿರುವ ಎಲ್ಲ ಮಹನೀಯರಿಗೂ ನಾನು ಅತ್ಯಂತ ಕೃತಜ್ಞ ನಾಗಿದ್ದೇನೆ

ಶ್ರೀ ಆದ್ಯ ರಾಮಾಚಾರ್ಯರ ಅಭಿಪ್ರಾಯದ (ಆಂಗ್ಲ ಭಾಷೆಯ) ಪತ್ರವನ್ನು ಇಲ್ಲಿ ಮುದ್ರಿಸಲಾಗಿದೆ

(2) ಯಾಲಪದ ಛಂದಸ್ಸಿನಲ್ಲಿ ರಚಿಸಿರುವ ಈ ಪದ್ಯ ಗ್ರಂಥವನ್ನು ಆಮೂಲಾಗ್ರವಾಗಿ ಅವಲೋಕಿಸಿ ಇದಕ್ಕೆ ತಮ್ಮ ಮುನ್ನುಡಿಯನ್ನು ನೀಡಿರುವ ನನ್ನ ಪರಮ ಮಿತ್ರರೂ ಕನ್ನಡದ ಸುಪ್ರಸಿದ್ಧ ವಿದ್ವಾಂಸರೂ ಆದ ಡಾ|| ಟಿ ವಿ ವೆಂಕಟಾಚಲ ಶಾಸ್ತ್ರೀ ಅವರಿಗೆ ನನ್ನ ಹೃತ್ಪೂರ್ವಕವಾದ ಧನ್ಯವಾದಗಳು.

[ಇವರ ಮುನ್ನುಡಿಯ ಕೊನೆಯಲ್ಲಿ, "ಮಾತ್ರಾಲಯಗತಿಗೆ ಒಗ್ಗಿರುವ ಆಧುನಿಕ ವಾಚನ ಪದ್ಧತಿಯ ಸಹೃದಯರಿಗೆ ಮಾರ್ಗದರ್ಶನವಾಗಿ, ಈ ಬಂಧ ವನ್ನು ಗಣನಿಯಮಾನುಸಾರವಾಗಿ ಪ್ರಸ್ತಾರಿಸಿದರೆ ಹೇಗಿರಬಹುದೆಂದು ತಿಳಿಯಲು, ರಾಯರು ತಮ್ಮ ನಿವೇದನೆಯಲ್ಲಿ ಮಾದರಿಗಳನ್ನು ಉದಾಹರಿಸಿದ್ದರೆ ಚೆನ್ನಾಗಿತ್ತು"

ಎಂದು ಸೂಚಿಸಿದ್ದಾರೆ ! ಇನ್ನೂ ಕಾಲ ಮಿಂಚಿರಲಿಲ್ಲವಾದ ಕಾರಣ, ನಾನು ಅವರ ಸೂಚನೆಗೆ ತಲೆಬಾಗಿ, ಈ ಯಾಲಪದ ಛಂದಸ್ಸಿನ ಪದ್ಯಗಳನ್ನು ಹಾಡಬಹುದಾದ ಮಾದರಿಗಳನ್ನು ಮುಂದೆ ಪ್ರತ್ಯೇಕವಾಗಿ ಕೊಟ್ಟಿರುತ್ತೇನೆ ]

(3) ಈ ಗ್ರಂಥವನ್ನು ಅಚ್ಚುಕಟ್ಟಾಗಿ ಸಕಾಲದಲ್ಲಿ ಮುದ್ರಿಸಿ ಸಹಕರಿಸಿರುವ ಪ್ರಭಾ ಮುದ್ರಣಾಲಯದ ಒಡೆಯರೂ ನನ್ನ ಆತ್ಮ ಬಂಧುಗಳೂ ಆದ ಶ್ರೀ ಡಿ ಎಸ್ ಕೃಷ್ಣಾಚಾರ್ಯ ಅವರಿಗೂ ನಾನು ಆಭಾರಿಯಾಗಿದ್ದೇನೆ

ಗ್ರಂಥಕರ್ತ

To

THE EDITOR,
T T Devasthanams
TIRUPATHI-517 501

Sir,

*Sub* Recommendation of 'KALIPADA' a folk-lore in Kannada, for financial assistance from T T Devasthanams under the Scheme—"Aid for Publication of Religious Books

## OPINION

'Kalipada' is a poetical work written in a form of Kannada Janapada Metre called "Yala Pada" which can be rendered to music. It is written in a style which is easily understandable. It is religiously meaningful, emotional and consists of laya vinyasa also. It tries to propagate morality and righteousness based on Bhakti or devotion of a high order. The work comprises of 54 cantos including the introductory canto (Peethika Sandhi). It contains 910 stanzas. Each stanza in this work is a unit and may be called a Muktaka, as in the case of the poems of Sarvagna of Kannada Literature and Vemana of Telugu Literature. It establishes the high values of Indian human life. Here and there we come across satirical expressions, and humorous phrases which have a didactic purpose—to enable the reader to rectify his mistakes, purify his heart and live a noble life.

The name of the work itself is peculiarly wonderful

1. KALIPADA—means, learn and sing the great moral ideas that it contains

F

2 It also means, that in this Kaliyuga the man is surrounded by many kinds of vices which he has to overcome and find out the way of upliftment

3. It may also mean that it is a Pada for the Kalis i.e., men of valour.

The author of this work is Gamaki Sri M Raghavendra Rao. He has written and published many works based on Dharma--viz. Sri Satya Deva Charite, Sri Vasudeva Vijaya, Sri Venkatesha Vijaya and many more. He is a staunch devotee of Lord Venkateshwara He is the Kulaguru of famous gamakis of Karnataka, an Anubhavi of a ripe old age of 75 years

It is quite in keeping with the present times that his work namely KALIPADA should be printed for the benefit of the people

Hence I have great pleasure to recommend this case for needful financial assistance

---

(Copy of the letter dated 22-4-1990 signed by Sri Adya Ramacharya and sent to the Editor, T.T D., Tirupathi)

## ಯಾಲಪದ ಛಂದಸ್ಸಿನ ಪದ್ಯವನ್ನು ಓದುವ ಅಥವಾ ಹಾಡುವ ಕ್ರಮ

(ಒಂದು ಮಾರ್ಗದರ್ಶನ)

(1) 3 ಮಾತ್ರೆಯ 4 ಗಣವುಳ್ಳ ಕನಕದಾಸರ ಈ ಪದವನ್ನು ಹಾಡುವ ರೀತಿಯನ್ನು ನಾವೆಲ್ಲರೂ ಕೇಳಿದ್ದೇವಷ್ಟೆ! ಅದರ ಒಂದು ನುಡಿಯ ಉದಾಹರಣೆಯನ್ನು ಈ ಕೆಳಗೆ ಕೊಡಲಾಗಿದೆ

ಈಶ ನಿನ್ನ ಚರಣ ಭಜನೆ
ಆಶೆಯಿಂದ ಮಾಡುವೆನೊ
ದೋಷರಾಶಿ ನಾಶಮಾಡೊ ಶ್ರೀಶ ಕೇಶವ ||

(ಇದು ಭೋಗ ಷಟ್ಪದಿಯ ಅರ್ಧಪದ್ಯ, ಉತ್ಸಾಹ ರಗಳೆಯ ಧಾಟಿ)

ಮೇಲ್ಕಂಡ ಪದ್ಯವನ್ನೇ "ಯಾಲಪದ"ವನ್ನಾಗಿ ಪರಿವರ್ತಿಸಿದರೆ ಅದು ಹೀಗೆ ಬರುವುದು.

ಈಶ ನಿನ್ನ ಚರಣ ಭಜನೆ–ಆಸೆ ಯಿಂದ ಮಾಡು ವೆನೊ
ದೋಷ ರಾಶಿ ನಾಶ ಮಾಡೆ ಲೊ – ಶ್ರೀಶ ಕೇಶವ
(ದಾಸ ಜನರ ನುದ್ಧ ರಿಸೆ ಲೊ) ||

ಇಲ್ಲಿ ಎರಡನೇ ಸಾಲಿನಲ್ಲಿ ಬರುವ ವ್ಯತ್ಯಾಸ ಗಮನಿಸಿ! "ಮಾಡೆಲೊ" ಎನ್ನುವಾಗ **ಲೊ** ಎಂಬಕ್ಷರ ಹೆಚ್ಚಾಗಿ ಸೇರಿದೆ–ಇದು 2 ಮಾತ್ರಾ ಕಾಲದ ಒಂದು ಗುರು ಇಲ್ಲಿ ಮುಂದೆ ಬರುವ "ಶ್ರೀಶ ಕೇಶವ" ಎಂಬುದನ್ನು 2ನೇ ಸಾಲು ಹಾಡುವಾಗ ಲಯಕ್ಕೆ ಹೊಂದಿಸಿಕೊಂಡು ಹಾಡಬೇಕು

ಈ ಎರಡನೇ ಸಾಲಿನ "ದೋಷರಾಶಿ ನಾಶಮಾಡೆಲೊ" ಎಂಬಂತೆಯೇ ಮೂರನೆಯ ಸಾಲೂ ಬರುತ್ತದೆ (ತ್ರಿಪದಿಯಲ್ಲಿ ಬರುವಂತೆ).

ಆದ್ದರಿಂದ ಯಾಲಪದದ ಪದ್ಯವನ್ನು ಅಲ್ಲಲ್ಲಿ ಸಾಂದರ್ಭಿಕವಾಗಿ, 3 ಮಾತ್ರೆಯ ಗಣಗಳುಳ್ಳ ಧಾಟಿಯಲ್ಲೂ ಹೇಳಬಹುದಾಗಿದೆ ಇದು ಒಂದು ಕ್ರಮ, ಅಥವಾ 3–4 ಮಾತ್ರಾ ಗಣಗಳ ಧಾಟಿಯಲ್ಲೂ ಹೇಳಬಹುದು.

ಇದೇ ಪದ್ಯವನ್ನೇ 4 ಮಾತ್ರೆಯ 1 ಗಣವುಳ್ಳ ಪರಿವರ್ಧಿನೀ ಷಟ್ಪದಿಯ ಮಾರ್ಗದಲ್ಲಿ (ಮಂದಾನಿಲ ರಗಳೆ ಧಾಟಿಯಲ್ಲಿ) 3 ಮಾತ್ರೆಗಳನ್ನು 4 ಮಾತ್ರೆಗಳಾಗಿ ಹಿಗ್ಗಿಸಿ, ವಾಚನವನ್ನು ಮಾಡಬಹುದು, ಇದು ಆದಿತಾಳದ ನಡೆಗೆ ಹೊಂದಿಕೊಂಡಿದ್ದು ಯಾಲಪದದ ಪದ್ಯವನ್ನು ಹೀಗೆ ಹಾಡಿದರೇ ಚೆನ್ನಾಗಿರುತ್ತದೆಂಬುದು ನನ್ನ ಅನುಭವ ಸಿದ್ಧಾಂತ, ಅಲ್ಲದೆ ಈ ಕ್ರಮವನ್ನು ಎಲ್ಲರೂ ಸುಲಭವಾಗಿ ಅನುಸರಿಸಬಹುದೆಂಬುದೂ ನನ್ನ ಮತ ಇದು ಒಂದು ಕ್ರಮ

**ಸೂಚನೆ :—**(i) ಆಯಾ ಪದ್ಯಗಳಲ್ಲ ನಿರೂಪಿತವಾಗಿರುವ ವಿಷಯ (ಸಾಹಿತ್ಯ)ಕ್ಕೆ ಅನುಗುಣವಾಗಿ, ಅವುಗಳ ಅರ್ಥ-ಭಾವಗಳಿಗೆ ಒಪ್ಪುವ ರಾಗಗಳಲ್ಲಿ (ನಾಂಗಶ್ಚದಂತೆ ಲಯವನ್ನನುಸರಿಸಿ) ಇದನ್ನು ಸೊಗಸಾಗಿ ಹಾಡಲೂ ಬರುವುದು

(ii) ವಾಚಕರು ಇಲ್ಲಿ ಇನ್ನೊಂದು ಮುಖ್ಯಸಂಗತಿಯನ್ನು ಗಮನಿಸಬೇಕು. ಪದ-ಪದ್ಯಗಳನ್ನು ಹಾಡುವ ಕ್ರಮದಲ್ಲಿ ಒಂದು ರಹಸ್ಯವಿದೆ! ಇದರಲ್ಲಿ ಸ್ವಾರಸ್ಯವೂ ಅಡಗಿದೆ! ಹೇಗೆಂದರೆ :—

(ಅ) ತಾಳಗತಿ ಅನುಸರಿಸಿ ವಿಳಂಬಕಾಲದಲ್ಲಿ ಹಾಡಿದರೆ ಅದು "ಪದ" ವಾಗುತ್ತದೆ

(ಆ) ಆ ಸಾಹಿತ್ಯವು ರಚನೆಯಾಗಿರುವ ಛಂದಸ್ಸಿನ ಗತಿಯಲ್ಲೇ ಹಾಡಿದರೆ ಅದು "ಪದ್ಯ"ವಾಗುತ್ತದೆ!

ಅಂತೂ ಮೇಲೆ ತಿಳಿಸಿರುವ ಕ್ರಮಗಳಲ್ಲಿ "ಯಾಲಪದ"ವನ್ನು ಗದ್ಯದಂತೆಯೋ, ಪದ್ಯದಂತೆಯೋ ಅಥವಾ ಪದ(ಕೀರ್ತನೆ) ದಂತೆಯೋ ಸಾಹಿತ್ಯ ಪ್ರಧಾನವಾಗಿ ಹಾಡಬಹುದಾಗಿದೆ

**ಈ ಕಾವ್ಯರಚನೆಯಲ್ಲಿ ಅಳವಡಿಸಿರುವ ಒಂದು ವಿಶೇಷ ನಿಯಮವನ್ನು ಕುರಿತು ಒಂದು ಮಾತು :—**

ಯಕ್ಷಗಾನ ಚಂಪೂ ಕಾವ್ಯಗಳಾದ ಹನುಮದ್ವಿಲಾಸ, ಕುಚೇಲೋಪಾಖ್ಯಾನ ಮತ್ತು ಕಾಳಿಂಗಮರ್ದನ ಗ್ರಂಥಗಳಲ್ಲಿ ಉಪಯೋಗಿಸಲ್ಪಟ್ಟಿರುವ ಯಾಲಪದ ಪದ್ಯಗಳ ಸಂಖ್ಯೆಯು ಕ್ರಮವಾಗಿ 3, 36 ಮತ್ತು 8 (ಎಂದರೆ ಒಟ್ಟು 47) ಆಗಿವೆ

ಇವುಗಳ ಪೈಕಿ ಕೇವಲ 6 ಪದ್ಯಗಳಲ್ಲಿ ಮಾತ್ರ 2ನೇ ಸಾಲಿನ ಪೂರ್ವಾರ್ಧದ ಮತ್ತು 3ನೇ ಸಾಲಿನ ಕೊನೆಯಲ್ಲಿ ಅಂತ್ಯಾಕ್ಷರ ಪ್ರಾಸವಿದೆ (ಉಳಿದ ಪದ್ಯಗಳಲ್ಲಿ ಇಲ್ಲ!)

ಆದರೆ ನಾನು ಈ ಅಂತ್ಯಪ್ರಾಸವಿರುವ ಪದ್ಯಗಳ ಸೌಂದರ್ಯವನ್ನು ಗಮನಿಸಿ, "ಕಲಿಪದ"ದಲ್ಲಿ ಈ ಪದ್ಯಜಾತಿಯ ಛಂದಸ್ಸಿನಲ್ಲಿ ಇದೂ ಒಂದು ಮುಖ್ಯಲಕ್ಷಣವಾಗಿರುವುದು ಒಳ್ಳೆಯದೆಂದು ಈ ನಿಯಮವನ್ನು ಕಾರ್ಯಗತಮಾಡಿದ್ದೇನೆ

ಗಮಕಿ ಎಂ. ರಾಘವೇಂದ್ರರಾವ್

## ಇದೇ ಗ್ರಂಥಕರ್ತರಿಂದ ರಚಿತವಾದ ಇತರ ಕೃತಿಗಳು

| | | |
|---|---|---|
| | | ರೂ |
| (1) | ಕಲಿಯ ಕಾಣಿಕೆ (ಆತ್ಮಕಥೆ) | 50–00 |
| (2) | ಆನಂದಗೀತೆ (ಕನ್ನಡ ದ್ವಾದಶ ಸ್ತೋತ್ರ) | 4–50 |
| (3) | ಮಧ್ವಗೀತೆ (ಹಾಡು) | 0–50 |
| (4) | ಶ್ರೀ ವಾಸುದೇವ ವಿಜಯ | ಪ್ರತಿ ಮುಗಿದಿದೆ |
| (5) | ಶ್ರೀ ವೆಂಕಟೇಶ ವಿಜಯ | ,, |
| (6) | ಶ್ರೀ ರಾಘವೇಂದ್ರಗುರು ಕೀರ್ತನಮಾಲೆ | ,, |
| (7) | ಮೈಸೂರು ಕೋಗಿಲೆ (ಕವನ, ಹಾಡು, ಹರಟೆ) | 3–50 |
| (8) | ಗಮಕ ಗೀತೆಗಳು (ಕವನ–ಹಾಡು) | 1–75 |
| (9) | ಶ್ರೀ ವ್ಯಾಸರಾಯ ಮಹಾತ್ಮೆ | ಪ್ರತಿ ಮುಗಿದಿದ |
| (10) | ಗಮಕಿ (ಪದ್ಯ ಶತಕ) | 1–50 |

# " ರಾಘಣ್ಣನ ಕಲಿಪದ "

## " ಪೀಠಿಕಾ ಸಂಧಿ "

### ಯೂಲಪದ ಖಂಡಸ್ಸು

ಶ್ರೀರಮಣ ರಘುವರ ಕಾರುಣ್ಯವಾರಿಧಿ ನಿನ್ನ
ಸಾರಸಾಂಘ್ರಿ ಭಜಿಸಿ ಮನದೊಳು—ನಾ ಬೇಡಿಕೊಂಬೆ
ಕೋರೋ ಕರುಣ ದೀನ ಜನರೊಳು || ೧ ||

ಸ್ವಾಮಿ ರಾಮ ನಿನ್ನ ದಿವ್ಯ ನಾಮಸ್ಮರಣೆ ಮಾಡುವಂತೆ
ನೇಮವಿತ್ತು ಜಗವ ರಕ್ಷಿಸೊ–ಕರುಣಾಸಮುದ್ರ
ಪಾಮರ ಪತಿತರ ಪಾಲಿಸೊ || ೨ ||

ಅರಿಯದ ಅಜ್ಞಾನಿಗಳ ಮೆರೆಯುವ ತಾಮಸಿಗಳ
ಮರೆ ಮೋಸ ಮಾಡುವ ದುಷ್ಟರ—ಅವಗುಣಗಳ
ಪರಿಹರಿಸಿ ಪೊರೆಯೊ ಸರ್ವರ || ೩ ||

ನಿನ್ನಾಧೀನ ಸಕಲ ಜಗ ನಿನ್ನಾಧೀನ ಸಕಲ ಜನ
ನಿನ್ನಾಧೀನವೀ ಬ್ರಹ್ಮಾಂಡವು—ನಿನ್ನನು ಬಿಟ್ಟು
ಅನ್ಯವಿಲ್ಲವಿದು ಸತ್ಯವು || ೪ ||

ನೀನೇ ಸಕಲ ಪ್ರೇರಕನು ನೀನೇ ಸಕಲ ತಾರಕನು
ನೀನೇ ಸರ್ವಜೀವ ರಕ್ಷಕ ನಾಗಿರಲಾಗಿ
ನೀನೇಕಾದೆಯೊ ಉಪೇಕ್ಷಕ || ೫ ||

ತಾಯೆ ಜಗನ್ಮಾತೆ ಲಕ್ಷ್ಮಿ ಮಾಯೆ ಕಮಲಜಾದಿ ಸುರ
ಗೇಯೆ ಸಕಲ ಭಾಗ್ಯದಾಯಿನಿ—ದಯಮಾಡೆ ದೇವಿ
ಶ್ರೀಯರಸನ ಹೃದಯವಾಸಿನಿ || ೬ ||

ಜನಕನಾಜ್ಞೆಯಂತೆ ಜಗದ ಸೃಷ್ಟಿ ಕಾರ್ಯಗೈದು ಸದಾ
ವನಜನಾಭನನ್ನು ಪೂಜಿಪ—ನಾಲ್ಮೊಗನೆ ನಮಿಪೆ
ವಿನುತ ಸತ್ಯ ಲೋಕದಧಿಪ || ೭ ||

ಸರಸತಿಯೆ ವಿಧಿಸತಿಯೆ ಸರಸವಚನ ಪಾಲಿಸಮ್ಮ
ನಿರುತ ನಿನ್ನ ಕೃಪೆಯೊಳೆನಗೆ–ಶ್ರೀಪತಿಯ ಸ್ಮರಣೆ
ದೊರಕಿಸೆಂದು ಬೇಡ-ವೆ ನಿನಗೆ ‖ ೮ ‖

ಮೂರು ಯುಗದಲಿ ರಾಮ ಶೌರಿ ವೇದವ್ಯಾಸರನ್ನು
ಆರಾಧಿಸಿದ ಮುಖ್ಯ ಪ್ರಾಣನ–ಜೀವೋತ್ತಮನ
ಭಾರತಿಯರ ನೆನೆವೆನನುದಿನ ‖ ೯ ‖

ಸಾಸಿರ ನಾಲಗೆಯಿಂದ ವಾಸುದೇವನನು ನುತಿಪ
ಶೇಷನ ವೇಣ್ ಗರುಡದೇವನ–ತತ್ಪತ್ನಿಯರ
ಸೇಸೆಯ ಬೇಡುವೆ ಪ್ರತಿದಿನ ‖ ೧೦ ‖

ಗಂಗಾಧರ ಹರ ಶಿವಲಿಂಗ ಭಕ್ತರಂತರಂಗ
ರಂಗನನೊಲಿಸಲು ಮನದಲಿ–ಪ್ರೇರಿಸೊ ಶಿವೆಯ
ಧಾರ್ಂಗ ಚಂದ್ರಚೂಡ ತ್ರಿಶೂಲಿ ‖ ೧೧ ‖

ಸರ್ವಮಂಗಳಾಂಗಿ ಶಿವೆ ಮುಕ್ಕಣ್ಣನಧಾರ್ಂಗಿ ಗೌರಿ
ಪಾರ್ವತಿಯೆ ನಾರಾಯಣಿಯೆ–ಪಾಲಿಸು ನಮ್ಮ
ಗರ್ವಮುರಿದು ಸನ್ಮತಿಯೀಯೆ ‖ ೧೨ ‖

ಮುದ್ದುಗಣಪತಿಯೆ ನೀನೆದ್ದು ಬಾರೊ ದಯವ ತೋರೊ
ತಿದ್ದುತೆನ್ನ ತಪ್ಪುಹೆಜ್ಜೆಯ–ಈ ಕೃತಿಯ ರಚನೆ
ಶುದ್ಧವಿರ್ಪವೊಲು ಮಾಡೈಯ್ಯ ‖ ೧೩ ‖

ತಾರಕವಧೆಗೆ ನಿನ್ನುಪಕಾರವ ಮರೆವುದೆಂತೊ
ಮಾರರಮಣಸುತ ಮನ್ಮಥ–ನಿನ್ನಯ ತ್ಯಾಗ
ವೀರೇಳು ಲೋಕಕೆ ವಿಖ್ಯಾತ ‖ ೧೪ ‖

ನೀನು ಕಾಣದಿದ್ದರೇನು ನಿನ್ನ ಮಹಿಮೆ ಬಲ್ಲರೆಲ್ಲ
ಜಾಣನಹೆ ಮೂಲೋಕದೊಳು–ಮಾರನೆ ನಮ್ಮ
ಮಾನವ ರಕ್ಷಿಸೊ ದಯಾಳು ‖ ೧೫ ‖

ಎಂಟು ದಿಕ್ಕಿನಧಿಪರು ಎಂಟೊಂದು ಗ್ರಹಗಳಾದಿ
ಯುಂಟಾದ ಮುಕ್ಕೋಟಿ ದೇವರೆ–ನಮ್ಮನುದಿನದ
ಕಂಟಕ ಹರಿಸಿ ಪೊರೆಯಿರೆ ॥ ೧೬ ॥

ಮೂರು ಲೋಕದೊಡೆಯನ ಮೂರು ವ್ಯಾಪಾರಗಳ ಕ
ಣ್ಣಾರೆ ಕಂಡ ಕಾಣುತಿರುವ–ಗುರುಭಕ್ತರೊಲುಮೆ
ಕೋರಿ ನಾವು ಧನ್ಯರಾಗುವ ॥ ೧೭ ॥

ಮಧ್ವಯತಿಯ ಸಂಪ್ರದಾಯಬದ್ಧಯತಿವರರ ಹರಿ
ಸದ್ಭಕ್ತಿಪಂಥವ ಸಾರಿದ–ದಾಸಶ್ರೇಷ್ಠರ
ಪದ್ಮಪಾದ ಸ್ಮರಿಪೆ ಸರ್ವದ ॥ ೧೮ ॥

ವಿಶ್ವದೊಡೆಯ ನಿನ್ನಾಜ್ಞೆಯ ವಿಶ್ವಾಸದಿ ಶಿರದಿ ಪೊತ್ತು
ನಶ್ವರ ಶರೀರವಿದರೊಳು–ಭಜಿಸಲು ನಿನ್ನ
ಆಶ್ವಾಸನೆ ಮುಖ್ಯ ಕೃಪಾಳು ॥ ೧೯ ॥

ಕರ್ತೃ ನೀನು ನಮ್ಮೆಲ್ಲರ ಕರ್ತವ್ಯಗಳ ಮಾಡಿಸುವೆ
ಕೃತ್ಯಾಕೃತ್ಯವೇನನರಿವೆವೊ–ಗೋವಿಂದ ನಿನ್ನ
ಭೃತ್ಯರಾವು ನಿನ್ನಾಧೀನವೊ ॥ ೨೦ ॥

ಜ್ಞಾನವೊ ಅಜ್ಞಾನವೊ ನಾವೇನ ಬಲ್ಲೆವಯ್ಯ ಸ್ವಾಮಿ
ನೀನು ನಮ್ಮನೆಲ್ಲ ತಿಳಿದಂತೆ–ನಾವ್ ತಿಳಿಯಲಳವೆ
ನೀನೆ ಬಲ್ಲೆ ನಮ್ಮಯ ಚಿಂತೆ ॥ ೨೧ ॥

## ಮೊದಲನೆಯ ಸಂಧಿ

### ಕಲಿಪದ–ಯಾಲಪದ

ಭರತ ಭೂಮಿ ಪುಣ್ಯ ಭೂಮಿ ಭರತ ಭೂಮಿ ಕರ್ಮ ಭೂಮಿ
ಭರತ ಭೂಮಿ ದೇವ ಭೂಮಿಯು—ಎಂದೆಂಬುದೆಲ್ಲ
ಮರೆತ ಮಾತಾಯ್ತಿಂದಿನ ಸ್ಥಿತಿಯು ॥ ೧ ॥

ಘೋರಕ್ಷಾಮವಾವರಿಸಿ ನೀರು ನೆರಳು ಇಲ್ಲದಾಯ್ತು
ಮಾರಿ ಮಸಣಿ ಪೂಜೆ ಮುಂದಾಯ್ತು—ಮಾಧವ ನಿನ್ನ
ಆರಾಧನೆಯಪರೂಪವಾಯ್ತು ॥ ೨ ॥

ಕರಗಿ ಕೊರಗಿ ನರಳುತಿಹ ಧರಣಿಯ ಜೀವರ ಕಂಡು
ಮರುಗಿ ಕರಗುತೆನ್ನ ಹೃದಯ—ಈ ಪದಗಳನು
ಬರೆಯಲೆಳಸಿ ಗುರು ಪ್ರೇರಣೆಯ ॥ ೩ ॥

ಬಲವು ಬರಲು ಹರಿಯ ಕೃಪೆಯಿಂದೂಲವಿನಿಂದ ರಚನೆಗೈದ
ಆಲಸದೆ ಈ ಯಾಲಪದವ–ಸುಗೀತೆಯಿದಕೆ
"ಕಲಿಪದ"ವೆಂದಿಟ್ಟೆ ನಾಮವ ॥ ೪ ॥

"ಕಲಿಪದ"ವೆಂದನಲಿದು ಕಲಿಯುಗದ ಪದಗಳೆಂದು
ಕಲಿತು ಪಾಡುವ ಪದ್ಯಗಳೆಂದು—ತಿಳಿವುದು ನೀತಿ
ಕಲಿತು ಜನರು ಕ್ಷೇಮವಿರಲೆಂದು ॥ ೫ ॥

ಯಾಲಪದವ ಹಾಡಿದರುಯ್ಯಾಲೆ ತೂಗಿದಂತೆ ಮನ
ದಾಲಸ್ಯವು ಕಳೆದು ಮೋದವ—ನೀವುದು ನಿತ್ಯ
ವಾಲಿಸಿರೀ ಸೊಗಸು ಪದ್ಯವ ॥ ೬ ॥

"ಕಲಿಪದ" ಖಯಾಲಿ ಪದವು ! "ಕಲಿಪದ" ಕಲಿತವರ ಪದವು
"ಕಲಿಪದ" ಕಲಿಗಳ ಪದ್ಯವು—ಕಲಿಯದ ಜನಕೆ
"ಕಲಿಪದ" ಸುಬೋಧ ಪ್ರದವು ॥ ೭ ॥

ಯಾಲಪದವೆಂಬ ಮಟ್ಟು ಲಾಲಿ ಹೇಳಿದಂತೆ ಕಿವಿಗೆ
ಬೀಳಲಾಕ್ಷಣದಿ ಹೃದಯವ–ಸೇರುತ ಸೌಖ್ಯ
ಮೇಳದಿ ತಣಿಪುದು ಮನವ ॥ ೮ ॥

ಚಂಪು ಯಕ್ಷಗಾನದೊಳು ಕಂಪನು ಬೀರುವ ಪದ
ಸೊಂಪಿನ ಸಾಂಗತ್ಯಕಿಂತಲು–ತ್ರಿಪದಿಗೂ ಮಿಗಿಲು
ಇಂಪು ತಂಪು ಹಾಡಿನಲಿಯಲು ॥ ೯ ॥

ಕನ್ನಡದ ಜನಪದದಿ ಮನ್ನಣೆಗಳಿಸಿರ್ಪಮಟ್ಟು
ಪನ್ನತಿಕೆ ಗರ್ವವ ಬಿಟ್ಟು–ಸರಳತೆ ತೊಟ್ಟು
ಕನ್ನಡಕ್ಕೆ ಸೊಗಸಿತೀ ಹುಟ್ಟು ॥ ೧೦ ॥

ತತ್ವನೀತಿಬೋಧೆಗಳ ನಿತ್ಯ ಬಾಳಿನ ರೀತಿಗಳ
ಉತ್ತಮ ನಡೆ ನುಡಿಯ ಪರಿಯ–ಸುಲಭದಿ ಪೇಳ
ಲುತ್ತಮವೀ ಶೈಲಿ ಸಹಾಯ ॥ ೧೧ ॥

ಪಂಡಿತರು ಪಾಮರರು ಮಂಡೆ ತೂಗಿ ಕೇಳುವರು
ಖಂಡಿತವೀ ಮಾತು ಪೇಳುವೆ–ಕೇಳಿದ ಜನರು
ಕಂಡ ಗುಣವ ಮುಚ್ಚಲಳವೆ ॥ ೧೨ ॥

ಗುಣವನೆಣಿಸುತಲಿದರ ಮನವನರಿತು ತಮ್ಮ ತಮ್ಮ
ಜನುಮವ ಸಾರ್ಥಕಗೊಳಿಪುದು–ನಿಸ್ವಾರ್ಥರಾಗಿ
ದಿನದ ಬಾಳ ಸೊಗದಿ ಕಳೆವುದು ॥ ೧೩ ॥

ಶ್ರೀಕಾಂತನ ಸ್ಮರಿಸಿರೆಂದು ಲೋಕಕೆ ಸಾರುವ ಕೃತಿ
ವ್ಯಾಕರಣ ತರ್ಕಗಳಿಲ್ಲವು–ಮಾನವ ಕುಲದ
ವ್ಯಾಕುಲ ಕಳೆವುದೆ ಧ್ಯೇಯವು ॥ ೧೪ ॥

ತೋರಿದೆರಡು ಪದಗಳನು ದಾರಿ ಗುರುವು ತೋರಿದಂತೆ
ಸೂರಸಾಕ್ಷ ರಘುವರನ–ಪದ ಪದುಮಗಳಲಿ
ಹಾರವಗೈದರ್ಪಿಸಿಹೆ ನಾ ॥ ೧೫ ॥

# ಎರಡನೆಯ ಸಂಧಿ

## ಬಾಳು–ಬದುಕಿನ ಗುರಿ

ಬೇರೆ ಯಾರನೊಲಿಸಲೆಂಗು ಸಾರುತಿಲ್ಲವಿದನು ನಾನು
ವಾರಿಜಲೋಚನ ನಿನ್ನಯ–ಭಕ್ತಿಯನೊಂದೆ
ಕೋರುವೆನೊ ಕಮಲಾಲಯ ॥ ೧ ॥

ಜೀವನದ ಗುರಿಯು ಸೇರುತೀವಸುಮತಿಯಲಿ ನಿತ್ಯ
ಭಾವಿಸುತ ಲೋಕ ಕ್ಷೇಮವ–ಜೀವಿಪರಿಗೆ
ದೇವ ದೇವ ಮೆಚ್ಚಿಸಲಹುವ ॥ ೨ ॥

ವ್ಯಾಪಾರ ಮಾಡಲು ಬೇಕು ಶ್ರೀಪತಿಯು ಮೆಚ್ಚುವಂತೆ
ತಾಪ ಬಡಿಸದೆ ಪ್ರಜೆಗಳ–ಧರ್ಮದ ಲಾಭ
ಲೋಪಗೊಳ್ಳದಂತೆ ದಣಿಗಳ ॥ ೩ ॥

ವೃತ್ತಿ ಯಾವುದಾದರೇನು ಸತ್ಯ ನಿಷ್ಠೆಯಿರಲು ಸಾಕು
ತೃಪ್ತನಾಗಬೇಕು ನಿತ್ಯದ–ಜೀವನದೊಳು
ಆಪ್ತನೆನಿಸಬೇಕು ಲೋಕದ ॥ ೪ ॥

ಅಂಗಡಿ ಮುಂಗಟ್ಟುಮನೆ ಶೃಂಗಾರ ಬಂಗಾರ ವಸ್ತ್ರ
ಸಂಗಡವಿದ್ದಾಗ ಬಡವರ–ಸಹಾಯಗೈಯೆ
ಮಂಗಳವಪ್ಪುದು ಕೊಡುವರ ॥ ೫ ॥

ನಿಷ್ಕಲ್ಮಷ ಹೃದಯದಿಂದ ನಿಷ್ಕಾಮಭಾವನೆಯಿಂದ
ಪುಷ್ಕರಾಕ್ಷನರ್ಚನೆಯೆಂದು–ಸೇವಿಪುದು ಜನರ
ನಿಷ್ಕಾಪಟ್ಯಮತಿಯೊಳೆಂದೆಂದು ॥ ೬ ॥

ಬಾಳಿನಲಿ ಮನುಜನಿಗೆ ತಾಳಿಕೆಯೊಂದಿರಬೇಕು
ಮೇಲೆ ಮೇಲೆ ಕಷ್ಟ ಸಹಿಸಲು–ಇದಕೆ ಸತ್ಯ
ಶೀಲತೆ ಸೌಜನ್ಯ ಗುಣಗಳು ॥ ೭ ॥

ಔದಾರ್ಯ ಗಾಂಭೀರ್ಯ ಸ್ಥೈರ್ಯ ಮೇದಿನೀ ಜನರೊಳೆಲ್ಲ
ಸೋದರ ಪ್ರೀತಿಯು ದೀನರ–ವಾತ್ಸಲ್ಯವಿವು
ಸಾಧಕವು ಜಯಿಸಲಾನರ ॥ ೮ ॥

ಈಸುಗುಣಗಳುಂಟಾಗಲು ದೇಶಕೆ ಸುಭಿಕ್ಷವಹುದು
ಲೇಸನೆಣಿಪ ಪ್ರಜೆಗಳಿಂದಲಿ–ಸರ್ವತ್ರ ಸೌಖ್ಯ
ತಾ ಸಮನಿಸುವುದು ಧರೆಯಲಿ ॥ ೯ ॥

ಜೀವನವು ಕಷ್ಟವೆಂದು ನೋವನನುಭವಿಸಲಾರ
ದಾವುದೋ ಕುಮಾರ್ಗದಿಂದಲಿ–ಬಾಳನು ಕಳೆಯೆ
ಜೀವನ ನಷ್ಟವು ನಿಜದಲಿ ॥ ೧೦ ॥

ವಿಷಯಸುಖಕಾಶೆ ಬಿದ್ದು ವಿಷಮ ಸಂಕಟಕೆ ಸಿಕ್ಕಿ
ವಿಷವ ಸೇವಿಸುತ ಪ್ರಾಣವ–ಕಳೆದುಕೊಂಬ
ವಿಷಯ ತೋರಿಸುವುದು ನರಕವ ॥ ೧೧ ॥

ತನ್ನೊಳು ಸಾಮರ್ಥ್ಯವಿರದೆ ತನ್ನ ನಂಬಿ ಬದುಕುವರನು
ಗನ್ನ ಗತಕದಿ ಕೊಲ್ಲುವ–ಘಾತಕ ಬುದ್ಧಿ
ಯನ್ನು ಗೈಯೆ ನಾಶವಾಗುವ ॥ ೧೨ ॥

ಸಲ್ಲದಿಂಥ ನಡತೆಗಳು ಬಲ್ಲ ಮಾನವರು ಜೋಕೆ
ಯಲ್ಲಿ ಬದುಕ ಸಾಗಿಸುವುದು–ದುರ್ಮಾರ್ಗ ಬಿಟ್ಟು
ಗೆಲ್ಲುವ ಸನ್ಮಾರ್ಗ ಹಿಡಿವುದು ॥ ೧೩ ॥

ಮನವೆ ಮುಖ್ಯ ಕಾರಣವು ಮನುಜರುನ್ನತಿಗೆ ಸದಾ
ಮನವೆ ಮೂಲ ಪಾಪ ಪುಣ್ಯಕೆ–ಇದನು ತಿಳಿದು
ಮನವ ತಹುದು ತನ್ನಾಧೀನಕೆ ॥ ೧೪ ॥

ಹೇಳಿದ ಸಂಗತಿ ಮತ್ತೆ ಹೇಳಿದಂತೆ ಕೆಲವೆಡೆ
ಕೇಳಿಸಿ ಮನಕೆ ಬೇಸರ–ತರಲುಬಹುದು
ತಾಳಿಕೆಯಿರಲಿ ಕೇಳ್ವರ ॥ ೧೫ ॥

ಮಾನವ ಸ್ವಭಾವದಿ ಸಾಮಾನ್ಯವಾಗಿ ಕಾಣಬರುವ
ನ್ಯೂನತೆಗಳನು ತೋರಿಸಿ–ಆ ದೋಷಯುಕ್ತ
ಹೀನ ನಡತೆಗಳನು ಟೀಕಿಸಿ ॥ ೧೬ ॥

ಭೂತದಯೆ ಪಶ್ಚಾತ್ತಾಪ ನೀತಿವಂತ ನಡತೆ ವಿವಿಧ
ಜಾತಿ ಮತ ಸೌಹಾರ್ದದಲಿ–ಬಾಳಿರಿಯೆಂಬ
ಮಾತ ಕೇಳಿ "ಕಲಿಪದ"ದಲಿ ॥ ೧೭ ॥

ಯಾಲಪದ ಸುಲಿದ ರಸಬಾಳೆಹಣ್ಣಿನಂತೆ ಮಧುರ
ಕೇಳುವ ಮಾನವರಿಗಾಲಿಸಿ–ಮನಶುದ್ಧಿಗೊಳಿಸಿ
ಶೀಲವ ತಿದ್ದುವುದು ಬೋಧಿಸಿ ॥ ೧೮ ॥

## ಮೂರನೆಯ ಸಂಧಿ

### ಎಲ್ಲರೂ ಭಗವಂತನ ಮಕ್ಕಳು

ಜಾತಿ ಯಾವುದಾದರೇನು ನೀತಿವಂತರಿಗೆ ಲೋಕ
ರೀತಿಯರಿತು ನಡೆಯುವರಿಗೆ–ಇಹಪರ ಸೌಖ್ಯ
ಖ್ಯಾತಿ ಗೌರವಗಳವರಿಗೆ ॥ ೧ ॥

ತನ್ನ ತಾನು ತಿಳಿಯಬಲ್ಲ ತನ್ನ ಹೊಣೆಯನರಿಯಬಲ್ಲ
ತನ್ನಂತೆ ಪರರನು ಕಾಣುವ–ಮಾನವನವ
ಧನ್ಯ ಜೀವನವ ನಡೆಸುವ ॥ ೨ ॥

ಸಕಲ ಸೃಷ್ಟಿಗೊಡೆಯನಾದ ಸಕಲ ಲೋಕನಾಥನಾದ
ಸಕಲರ ಸಲಹುವ ದೇವನು–ಒಬ್ಬನೆಯೆಂದು
ಅಕಳಂಕ ಮಾನವ ತಿಳಿವನು ॥ ೩ ॥

ಯಾವುದೆಲ್ಲ ಸಂಘಟನೆ ದೇವನ ಸಂಕಲ್ಪವೆಂದು
ಜೀವನು ಕಾರಣ ಮಾತ್ರನು–ಎಂಬುದನರಿವ
ನಾವನಾತ ಕೃತಕೃತ್ಯನು ॥ ೪ ॥

ನಾವು ನೋವು ದುಃಖ ಕಷ್ಟ ಜೀವನದಾಲಸ್ಯ ದಾಸ್ಯ
ಭಾವ ಪರರ ಪೀಡೆಗಳನು–ಸಹಿಸುವಾತ
ಕೋವಿದನು ಸಮಚಿತ್ತನು ॥ ೫ ॥

ಭೋಗ ಭಾಗ್ಯಗಳು ಬರಲಾಗಲೂ ಎಚ್ಚರವಿದ್ದು
ಬೀಗಿ ನಡೆಯದಂತೆಯಿರ್ಪವ–ದರ್ಪಾದಿಗಳ
ನೀಗಿದಾತ ಯೋಗಿಯೆನಿಸುವ ॥ ೬ ॥

ತನ್ನ ಕೆಲಸ ಕಾರ್ಯದಿಂದಲನ್ಯರಿಗಪಚಾರ ಮೋಸ
ಅನ್ಯಾಯಗಳಾಗದಂದದಿ–ನಿರ್ವಹಿಸುವ
ನುನ್ನತ ಜೀವಿಯು ಸತ್ಯದಿ ॥ ೭ ॥

ದೇವರಿಲ್ಲವೆಂಬ ಜನರು ದೇವರಿಂದ ಬದುಕಿಹರು
ದೇವರ ಹಂಗಿಸುವ ಜನರು—ಇವರೂ ಸಹ
ದೈವ ಕೃಪೆಯಿಂ ಬಾಳುತಿಪ್ಪರು ॥ ೮ ॥

ದೇವರ ನಂಬಿದವರು ದೇವರಿಂದ ಜೀವಿಸಿಹರು
ದೇವರ ಸ್ಮರಿಸುವ ಜನರು—ಎಂದೆಂದಿಗೂ
ದೇವರ ದಯೆಗೆ ಪಾತ್ರರು ॥ ೯ ॥

ಎಲ್ಲ ನಾನು ನನಗೆ ಮತ್ತೆ ಎಲ್ಲವೂ ನನ್ನಿಂದಲೆಂದು
ಕ್ಷುಲ್ಲಕವಾಡುವ ಮನುಜರು—ಇವರೂ ನಮ್ಮ
ಬಲ್ಲಿದ ದೇವಗೆ ಪ್ರಿಯರು ॥ ೧೦ ॥

ಏನೊಂದರಿಯದ ನರ ತಾನೇ ಎಲ್ಲಾ ಬಲ್ಲೆನೆಂದು
ಹೀನಮತಿಯೊಳಾಡುವೀ ನುಡಿ—ಎಷ್ಟು ಅಚ್ಚರಿ !
ಜ್ಞಾನಿ ಪೇಳುವನೆ ಈ ನುಡಿ ? ॥ ೧೧ ॥

## ನಾಲ್ಕನೆಯ ಸಂಧಿ

### ಆತ್ಮವಂಚಕರು

ಆತ್ಮವಂಚಕಗೆ ಪರಮಾತ್ಮನ ಚಿಂತನೆಯುಂಟೆ
ಆತ್ಮ ತತ್ವ ತಿಳಿಯದವಗೆ–ಸಚ್ಚಿದಾನಂದ
ದಾತ್ಮನರಿವು ಬಹುದೆ ಮೂರ್ಖಗೆ ॥ ೧ ॥

ಕೆಟ್ಟ ಯೋಚನೆಗಳ ಮನದೊಳಿಟ್ಟುಕೊಂಡು ಹೊರಗೆ ತಾನು
ಇಷ್ಟವಾಕ್ಯಗಳನು ನುಡಿಯುತ–ಬದುಕುವ ನರ
ಭ್ರಷ್ಟನೆನಿಸಿ ಕೆಡುವ ಖಂಡಿತ ॥ ೨ ॥

ಎಲ್ಲರೂ ಈ ಜಗದಲ್ಲಿ ನಿಲ್ಲರೆಂಬುದನು ತಿಳಿದು
ಸಲ್ಲದಪಕೃತ್ಯವೆಸಗುತ–ಸ್ವಾರ್ಥಿಯಾದವಗೆ
ಹಲ್ಲುಮುರಿವುದು ನಿಶ್ಚಿತ ॥ ೩ ॥

ಬಾಯಲಿ ಬೊಗಳಿದರೇನು ನಾಯಿಯಂತೆ ಮಂತ್ರಗಳ
ಸಾಯುವವರೆಗು ಮನುಜಗೆ–ತಪ್ಪದು ಕಷ್ಟ
ಆಯುವರಿತು ನಡೆಯದಾತಗೆ ॥ ೪ ॥

ನಿನ್ನೆ ಮೊನ್ನೆ ನಡೆದ ಕಾರ್ಯವನ್ನೀಗಲೇ ಮರೆಯುವಂಥ
ಕುನ್ನಿ ನರನು ತನ್ನ ತಿಳಿವನೆ–ತಿಳಿದು ತಾನು
ಧನ್ಯನೆನಿಸಿ ಬಾಳಬಲ್ಲನೆ ॥ ೫ ॥

ಕೂಪಕೂರ್ಮದಂತೆ ಮದಿಸಿ ಪಾಪಕರ್ಮಗಳನೆ ಮಾಡಿ
ತಾಪಬಡಿಸಿ ಪರರ ಸೌಖ್ಯವ–ಹಾನಿಗೈವವ
ಲೋಪಪುಣ್ಯನಾಗಿ ನಶಿಸುವ ॥ ೬ ॥

ಆಶೆಯೆಂಬ ಸಂಸಾರದ ಪಾಶದಲಿ ಬದ್ಧನಾಗಿ
ದೋಷ ಕೃತ್ಯಗಳನೆ ಗೈಯುವ–ಹೆಜ್ಜೆ ಹೆಜ್ಜೆಗೆ
ಮೋಸಹೋಗಿ ತಾನು ಕೆಡುವ ॥ ೭ ॥

ಕಂಡ ಕಂಡ ಕಡೆಗೆ ಮಾನವ—ಗುಂಡಗೆ ತಿರುಗಿಸುವವ
ಪುಂಡನಾಗದಿಹನೆ ಲೋಕದಿ—ಅವನ ಬಾಳು
ತುಂಡಾಗದಿರ್ಪುದೆ ಮಧ್ಯದಿ ॥ ೮ ॥

ಮಾನುಷ ಜನುಮವಿದ ಹಾನಿಗೊಳಿಸಬಾರದೆಂದು
ಜ್ಞಾನಿಗಳು ಪೇಳ್ದ ಬೋಧೆಯು—ನಮ್ಮಯ ಬಾಳೆ
ಜ್ಞಾನದ ನಂದಾದೀವಿಗೆಯು ॥ ೯ ॥

ಹಿಂದೆಗೈದ ಪಾಪಕರ್ಮದಿಂದ ಕಣ್ಣು ಕೈಯಿ ಕಾಲು
ಒಂದಿದ್ದರೊಂದಿಲ್ಲದಂತೆಯೆ—ಹುಟ್ಟುತ ನರ
ದಂದುಗ ಪಡುವುದು ಹುಸಿಯೆ ॥ ೧೦ ॥

ಹಿಂದಕಾದದ್ದಾಯಿತೆಂದು ಮುಂದಕೆಚ್ಚರವಿರಬೇಕೆಂದು
ಮಂದ ಬುದ್ಧಿಯನು ತ್ಯಜಿಸಿ—ಮತಿವಂತರಾಗಿ
ನಂದದಿ ಬಾಳಲು ಯೋಚಿಸಿ ॥ ೧೧ ॥

## ಐದನೆಯ ಸಂಧಿ

### ನರನೊಬ್ಬನೇ ಬಾಹಿರ

ಯಾವ ಪರಿ ನೋಡಿದರು ದೇವ ಸೃಷ್ಟಿಯೊಳಗೆ ಸಕಲ
ಜೀವಿಗಳು ಮನುಜನುಳಿಯೆ–ತಮ್ಮಯ ನಿಯತ
ಸೇವಾಕರ್ಮ ನಿರತರು ತಿಳಿಯೆ ॥ ೧ ॥

ಕಾಲ ಮೀರದಂತೆ ಕಾಲ ಕಾಲ ಕ್ಲುಪ್ತವಾಗಿ ಜೀವ
ಜಾಲ ಜಗದ ಚಕ್ರಗತಿಗೆ–ಸಹಕರಿಸುತಿರೆ
ಖೂಳನೀನರನೊಬ್ಬ ಹೊರಗೆ ॥ ೨ ॥

ಪಕ್ಷಿ ಮೃಗ ಸಂಕುಲವು ಕುಕ್ಷಿ ತುಂಬಿ ಬಾಳ್ವ ಜೊತೆಗೆ
ಪಕ್ಷಿವಾಹನನ ಸ್ಮರಿಸವೆ–ತಂತಮ್ಮ ಸರದಿ
ರಕ್ಷಿಸೆಂದು ಸ್ವರವ ಮಾಡವೆ ॥ ೩ ॥

ದಿನ ದಿನ ಸೂರ್ಯೋದಯಾಸ್ತ ದಿನ ದಿನ ಚಂದ್ರೋದಯಾಸ್ತ
ದಿನ ದಿನ ನಕ್ಷತ್ರಗಮನವು–ಗ್ರಹಚಲನೆ ನರಗೆ
ದಿನದ ಕೆಲಸ ಮುಗಿಸೆನ್ನುವವು ॥ ೪ ॥

ಬೆಟ್ಟ ಗುಡ್ಡ ಬಟ್ಟಬಯಲು ದಿಟ್ಟತನದಿ ಹರಿವ ನದಿ
ದಟ್ಟವಾದ ಕಾಡು ಕಣ್ಣಿಗೆ–ಕಂಡು ಸಾರವೆ
ಸೃಷ್ಟಿ ಸಂದೇಶವನು ಮನುಜಗೆ ॥ ೫ ॥

ಎಳೆಯ ಬಳ್ಳಿ ಪೈರು ಮೊದಲು ಬೆಳೆವ ಗಿಡ ಮರ ವೃಕ್ಷ
ತಳಿರೆಲೆ ಹೂ ಕಾಯಿ ಪಣ್ಗಳು–ನಿಸ್ವಾರ್ಥ ಸೇವೆ
ಸಲಿಸಿರೆಂದು ಪೇಳ್ವವೀಗಳು ॥ ೬ ॥

ಬೀಸುವ ಗಾಳಿಗೆ ಜಗಕೆ ಸೂಸುವ ಮಳೆಗೆ ಸತತ
ಆ ಸೂರ್ಯ ಚಂದ್ರರ ಕಾಂತಿಗೆ–ಕಾರಣ ನಮ್ಮ
ವಾಸುದೇವನಾಜ್ಞೆಯಿವರಿಗೆ ॥ ೭ ॥

ದಿನದ ನಿತ್ಯ ರೋಗರುಜಿನ ದಿನದ ನಿತ್ಯ ಸಾವು ಹುಟ್ಟು
ದಿನದ ನಿತ್ಯ ಸುಖವು ದುಃಖವು–ಮಾನವ ಕುಲಕೆ
ದಿನ ದಿನ ಸದ್ಬೋಧೆಗೈವವು ॥ ೮ ॥

ಪ್ರಾಣಿ ಪಕ್ಷಿ ಮೊದಲಾಗಿ ಮಾನವನು ಹೊರತಾಗಿ
ಶ್ವಾನವಾದರೂ ನಿಃಸ್ವಾರ್ಥದಿ—ನಡೆದು ದಿವ್ಯ
ಜ್ಞಾನ ಬೋಧಿಪುದು ಲೋಕದಿ ॥ ೯ ॥

ಈಶ ಕರುಣವೇನನೆಂಬೆ ಈ ಸೃಷ್ಟಿಯೊಳಗೆ ಮನುಜ
ಲೇಸಾಗಿ ಬದುಕಲೆನ್ನುತ—ಬೇಕಾದುದನ್ನು
ತಾ ಸೃಷ್ಟಿಗೈದಿಹನು ಸನ್ನುತ ॥ ೧೦ ॥

ನರರು ತಮ್ಮ ತಮ್ಮ ಕಾರ್ಯನಿರತರಾಗಿ ಪುಣ್ಯಗಳಿಸಿ
ಪರಮೇಶನ ಮರೆಯದಿರಲೆಂದು—ಸೌಲಭ್ಯವಿತ್ತು
ಪೊರೆಯುತಿಹ ಕೃಪಾಳುವೆಂದೆಂದು ॥ ೧೧ ॥

ಶ್ರೀಪತಿಯು ಮಾನವರನೀಪರಿ ಧರೆಯೊಳು ನಿಲಿಸಿ
ತಾ ಪರೀಕ್ಷಿಸುತ್ತಲೀಕ್ಷಿಪ—ತನ್ನನು ನರರು
ಜ್ಞಾಪಿಸಿಕೊಳ್ಳಲು ಸೂಚಿಪ ॥ ೧೨ ॥

ಅನುಸರಣೆ ತತ್ವನಿಷ್ಠೆಯನುಸಂಧಾನಾಚಾರದಿಂದ
ಮನುಜ ತನ್ನ ಸುಖದ ಬಾಳನ —ರೂಪಿಸಬಹುದು
ಮನವಿಕಾರವಿಲ್ಲದವನು ॥ ೧೩ ॥

ಗುಣವನೇ ಗ್ರಹಿಸುವ ಬುದ್ಧಿ ಮನವಚನ ಕಾಯಶುದ್ಧಿ
ದಿನದ ಸತ್ಕರ್ಮಗಳ ಸಿದ್ಧಿಯು—ನಿಃಸ್ವಾರ್ಥ ಸೇವೆ
ಮನುಜ ಕುಲದ ಯಶಕೆ ಹಾದಿಯು ॥ ೧೪ ॥

ಘೋರ ಟೀಕೆ ಟಿಪ್ಪಣಿಯು ದಾರಿತಪ್ಪಿ ನಡೆವರಿಗೆ
ಸಾರಬೋಧೆ ಸಜ್ಜನರಿಗೆ—ಸಮಾಜದೆಲ್ಲಾ
ನೂರಾರು ಕೋಟಿಯ ಜನರಿಗೆ ॥ ೧೫ ॥

ಭಗವಂತನ ಕರುಣ ಪಡೆವ ದುಗುಡ ಬೇಕು ಮನುಜಗೆಂಬ
ಸೊಗಸು ಮಾತನಿಲ್ಲಿ ನೋಳ್ಪುದು—ಈ ಪದಗಳಲ್ಲಿ
ಸುಗುಣವ ಸುಜನರು ಗ್ರಹಿಪುದು ॥ ೧೬ ॥

# ಆರನೆಯ ಸಂಧಿ

## ಜಗತ್ತಿನಲ್ಲಿ ಸತ್ಯವಂತರಿದ್ದಾರೆ

ದಾನಧರ್ಮಗೈವರುಂಟು ದೀನರಿಗುಪಕಾರವುಂಟು
ಜ್ಞಾನ ನೀತಿ ಬೋಧಿಪರುಂಟು–ಭೂಮಿಯ ಮೇಲೆ
ಮಾನವಂತ ಸುಗುಣಿಗಳುಂಟು ॥ ೧ ॥

ಕಾಲ ನೇಮನಿತ್ಯವಿಧಿ ವೇಳೆಯರಿತು ಮಾಳ್ಪರುಂಟು
ಶೀಲವಂತ ಮಾನವರುಂಟು–ಭಾರತದೊಳು
ಬಾಳುತಿಹ ಸುಜನ ಕುಲವುಂಟು ॥ ೨ ॥

ಪರಮ ಭಾಗವತರುಂಟು ಶರಣರ ಸಂದೋಹವುಂಟು
ಪರಿಪರಿ ಮತಗಳ ಜನರುಂಟು–ಜಿನ ಬುದ್ಧ ಕ್ರಿಸ್ತ
ಪರಮಹಂಸರ ಪೂಜಿಪರುಂಟು ॥ ೩ ॥

ಸತ್ಯಕಾಗಿ ಬಾಳ್ವರುಂಟು ನಿತ್ಯ ನೇಮಗೈವರುಂಟು
ಸತ್ಯದರ್ಶನಗೈದವರುಂಟು–ಸತ್ಸಂಗವುಂಟು
ಸತ್ಯಶೋಧನೆ ಮಾಳ್ಪವರುಂಟು ॥ ೪ ॥

ನೀತಿವಂತ ಜನಗಳುಂಟು ಖ್ಯಾತಿಪಡೆದ ಗಣ್ಯರುಂಟು
ಜಾತಿ ವೈರವಿಲ್ಲದವರುಂಟು–ನಿರ್ಮಲ ಮನದ
ಪ್ರೀತಿಯಿಂದ ಬಾಳ್ವ ಜನರುಂಟು ॥ ೫ ॥

ಕರುಣೆ ಪ್ರೀತಿದಾಕ್ಷಿಣ್ಯವ ಸರುವ ಜೀವರೊಳಗೆ ತೋರ್ಪ
ಪರಮ ದಯಾಮೂರ್ತಿಗಳುಂಟು–ನಮ್ಮಯ ನಾಡ
ಚಿರಕಾಲ ಪೊರೆಸುವ ಜನರುಂಟು ॥ ೬ ॥

ತಪ್ಪು ತಿದ್ದಿ ಜನರ ಮನದ ಕಪ್ಪನು ತೊಡೆದು ಸುಖ
ವಿರ್ಪಪರಿಯ ತಿಳಿಸುವರುಂಟು–ಗುರು ಹಿರಿಯರುಂಟು
ಒಪ್ಪ ಬಾಳ್ವೆ ನಡೆಸುವರುಂಟು ॥ ೭ ॥

ದೇವತಾರಾಧನೆಯುಂಟು ಭಾವಭರಿತ ಭಕ್ತಿಯುಂಟು
ಗೋವಿಪ್ರರಿಗೆ ಮನ್ನಣೆಯುಂಟು–ದೊಡ್ಡವರನ್ನು
ಸೇವಿಸುವ ರೂಢಿಯುಂಟುಂಟು ॥ ೮ ॥

ವ್ಯವಸಾಯವುದ್ಯೋಗ ಸಕಲ ವ್ಯವಹಾರ ಕೈಗಾರಿಕೆಯು
ವಿವಿಧ ಕುಶಲ ವಿದ್ಯೆ ಕಲೆಯಲಿ–ತಿಳಿದವರುಂಟು
ಅವನಿಯೊಳೀ ಭಾರತದಲಿ ॥ ೯ ॥

ಆದರೇನು ಇವರ ಸಂಖ್ಯೆ ಶೋಧಿಸಿ ತಿಳಿಯಲು ಬೇಕು
ಈ ಧರಣಿಯೊಳಗೆ ದುಷ್ಟರೇ–ಹೆಚ್ಚುತ ಬಂದ
ಈ ದರಿದ್ರಗತಿಯ ನೋಡಿರೆ ॥ ೧೦ ॥

ಅಲ್ಪ ಸ್ವಲ್ಪ ಮಳೆಯು ಬೆಳೆಯು ಸ್ವಲ್ಪ ಧರ್ಮವಿಹುದರಿಂದ
ಅಲ್ಪಮತಿಗಳೇ ಹೆಚ್ಚಿರಲು–ಮುಂದೇನು ಗತಿ
ಕಲ್ಪಾಂತದವರೆಗೆ ಬಾಳಲು ? ॥ ೧೧ ॥

ಇವರ ಮಧ್ಯೆ ಬಾಳಿ ಬದುಕಿ ಅವನಿಯೊಳಗೆ ದಿನವ ನೂಕಿ
ಬವಣೆ ಮರೆತು ಸತ್ಯಧರ್ಮದಿ–ನಡೆವಂಥ ಸುಜನ
ನಿವಹವುಂಟು ಶಿವನ ದಯದಿ ॥ ೧೨ ॥

## ಏಳನೆಯ ಸಂಧಿ

## ಕಲಿಯ ಮಹಿಮೆ

ಕಲುಷ ಮನದ ವೃತ್ತಿ ಚರ್ಯೆ ಕಲಿತು ನರರ ಬಾಳು ಕೆಡಲು
ಕಲಿರಾಯನ ಮಹಿಮೆಯೇನಿದು–ಪರಿಹಾರವೇನು
ಕಲಿಯ ಜನರು ಸುಖಿಪುದೆಂತಿದು ? ॥ ೧ ॥

ಮೂರು ದಿನದ ಕಾಯ ಸುಖಕೆ ನೂರು ತಪ್ಪುಗೈಯೆ ಸಾವಿ
ರಾರು ಜನುಮದಲ್ಲು ಸವೆಯದು–ಪಾಪವು ಬೆಳೆದು
ಘೋರ ಕಷ್ಟಪಡುವ ಪಾಡಿದು ॥ ೨ ॥

ಸುಖದ ಬಾಳ ಬದುಕಲೆಂದು ಸಕಲ ಮನುಜ ಕುಲದ ಬಯಕೆ
ಸುಖದಿ ಬಾಳ್ವ ಮಾರ್ಗ ತಿಳಿಯದು–ನಿಷ್ಕಾಮ ಕರ್ಮ
ಸುಖಕೆ ಹಾದಿಯೆಂಬುದರಿಯದು ॥ ೩ ॥

ಚಂಚಲಗತಿಯುಳ್ಳ ಜಗದಿ ಚಂಚಲಮನರಾಗಿ ಜನ
ಚಂಚಲ ಕರ್ಮಗಳನೆಸಗುತ–ಪಾಪವ ಗಳಿಸಿ
ವಂಚಿತರಾಗಿಹರು ಸಂತತ ॥ ೪ ॥

ವಿಶ್ವಮಾನವತೆಯರಿತು ವಿಶ್ವಾಸದಿ ಪರಸ್ಪರ
ವಿಶ್ವಮಾನವರು ಬಾಳ್ವುದು–ಎನ್ನುವ ತತ್ವ
ವಿಶ್ವಾಸಗಳಿಸದೇ ಹೋದುದು ॥ ೫ ॥

ಪ್ರತಿಯೊಬ್ಬ ಮಾನವ ತಾನು ಕೃತಕೃತ್ಯನಾಗುತ ಪರ
ಹಿತಕೆ ದುಡಿದು ತಾನು ಸುಖಿಸದೆ–ಬಾಳುವ ದಿನದಿ
ಮತಿಗೆಟ್ಟು ಮಣ್ಣಾಗಬಹುದೆ ? ॥ ೬ ॥

ನಿತ್ಯ ದಿನದ ಜೀವನದಿ ಸತ್ಯವಾಗಿ ನಡೆದು ಸುಜನ
ಸ್ತುತ್ಯನೆನಿಸಿ ಬದುಕ ನೋಕದೆ–ಸರ್ವಜ್ಞನೆಂದು
ನ್ಮತ್ತನಾಗಿ ಪೇಳ್ವುದೇನಿದೆ ? ॥ ೭ ॥

ಕನಸಿನ ಜೀವನವಿದಲ್ಲ ದಿನಗಳ ನೂಕಲು ಸಲ್ಲ
ಅನುಭವ ಸುವಿವೇಕವೇಕಿಲ್ಲ–ನಿರ್ಲಕ್ಷಿಸಲು
ಕೊನೆಗೆ ಬಾಳು ಹಾಳಾಗುವುದಲ್ಲ ! ॥ ೮ ॥

ನಂಬಿಕೆಯನಿಟ್ಟು ಬಾಳ ಡಂಭ ನಡತೆ ಬಿಟ್ಟು ಮನದಿ
ಅಂಬುಜಾಕ್ಷನಂಘ್ರಿ ಕಮಲವ–ಸ್ಮರಿಸುವ ಮನುಜ
ರುಂಬರು ಸಂಸಾರ ಸುಫಲವ ॥ ೯ ॥

ತಿನ್ನುವ ವ್ಯಂಜನಗಳು ಭಿನ್ನರುಚಿಯಿಂದಿರ್ದರು
ಅನ್ನವೇ ಮುಖ್ಯವಾಗಿರ್ಪಂತೆ–ಬೋಧೆಗಳಿವು
ಜನ್ಮ ಸಾಫಲ್ಯಕೆ ದೀವಿಗೆಯಂತೆ ॥ ೧೦ ॥

ಭಾವಿಸುತ ಮಾನವರು ದೇವ ಯೋಗ್ಯ ನಡತೆಯಿಂದ
ಜೀವನವ ಸಾಗಿಸುತ್ತಲಿ–ಸಂತೃಪ್ತಿಯಿಂದ
ಜೀವಿಸಲಿ ಮೇದಿನಿಯಲಿ ॥ ೧೧ ॥

ದಾಸರ ಭಕ್ತರ ಶರಣರಾ ಸಾಧು ಸಂತರ ಸರ್ವ
ದೇಶ ಭಾಷಾ ಪ್ರೇಮಿ ಕಲಿಗಳ–ಕವಿಗಳ ಹರಕೆ
ಪೋಷಿಸಲಿ ಮನುಜ ಕುಲಗಳ ॥ ೧೨ ॥

ದೇವ ರಘುವರ ನಮ್ಮ ಕಾವ ವೀರನಾರಾಯಣ
ನಾವ ಕಾಲದೊಳು ಸಕಲ–ಅನತ ಜನರ
ನೋಪಿ ರಕ್ಷಿಸಲಿ ಚಿರಕಾಲ ॥ ೧೩ ॥

# ಪರಸ್ಪರ ವೈಷಮ್ಯ ಏಕೆ?

ಕುಲದ ಹೆಸರಿನಲ್ಲಿ ಪರರ ಕುಲಗಳ ಧಿಕ್ಕರಿಸಬಹುದೆ
ಕುಲಗಳೆಲ್ಲವೊಂದೆ ದೈವವ–ಸೂಚಿಸುತಿರೆ
ಫಲವೆ? ಹೆಸರೊಳೇನು ವಿಪ್ಲವ? ॥ ೧ ॥

ಜಾತಿ ಬೇರೆಯಾಯಿತೆಂದು ಖ್ಯಾತಿಯಿಂದ ತೆಗಳಬಹುದೆ
ನೀತಿ ನಡತೆ ಮುಖ್ಯವಲ್ಲವೆ?–ಉದ್ಯೋಗಗಳ
ರೀತಿ ವಿವಿಧ ಮುಖಗಳಲ್ಲವೆ? ॥ ೨ ॥

ದೇಶ ಬೇರೆಯಾಯಿತೆಂದು ದ್ವೇಷವ ಮಾಡಲುಬಹುದೆ
ದೇಶ ದೇಶಗಳ ಮನುಜರು–ಸುಖಿಸಲಿ ಸದಾ
ದೋಷ ನೀಗಿ ಶಾಂತಿಪ್ರಿಯರು ॥ ೩ ॥

ಭಾಷೆ ಬೇರೆಯಾಯಿತೆಂದು ದೂಷಣೆ ಮಾಳ್ಪುದು ಸರಿಯೆ
ಭಾಷೆಗಳಿಗೆ ಭಾವ ಮುಖ್ಯವು–ವಾಗ್ದೇವಿಗಿದು
ಭೂಷಣವು ಭಾಷೆ ಸಕಲವು ॥ ೪ ॥

ಕೋಟಿ ಜನಕೆ ಕೋಟಿ ನಾಮ ಕೋಟಿ ರೂಪದಿಂದ ದೈವ
ನಾಟಕವಾಡಿಸಿ ಜೀವರ–ಗೆಲ್ಲಿಸುತಿರಲು
ಕೋಟಲೆ ನಮಗೇಕೆಯಿದರ? ॥ ೫ ॥

ನಮ್ಮ ಪಾತ್ರವೆಷ್ಟು ಜಗದಿ ಸುಮ್ಮನೆಷ್ಟು ಪ್ರೀತಿಯಿಂದ
ನಿರ್ಮಮಭಾವದಿ ವಹಿಸುತ–ಧನ್ಯತೆಯ ತಾಳಿ
ಗಮ್ಮನಿರ್ದು ಪೋಪುದುಚಿತ ॥ ೬ ॥

ಪಾತ್ರದ ನಿರ್ವಹಣೆಯಲ್ಲಿ ಸೂತ್ರಧಾರನಾಜ್ಞೆಯಂತೆ
ಮಾತ್ರವೇ ನಡೆದು ನಟಿಸೆ–ನಮ್ಮನು ಮೆಚ್ಚಿ
ಶ್ರೋತೃವರ್ಗ ಹರಸುವುದ್ಹೈಸೆ ॥ ೭ ॥

ಗುರುವೆ ಸೂತ್ರಧಾರನಿಲ್ಲಿ ನರರೇ ಪಾತ್ರ ಶ್ರೋತೃವೃಂದ
ಹಿರಿಯ ದಣಿಯೆ ಜಗದೀಶ್ವರನು—ನಾಟಕ ಸಂಸ್ಥೆ
ಹೊರೆಯ ಹೊತ್ತೀ ಜಗವ ಕಾಪನು ॥ ೮ ॥

ದೇವನೊಲಿಯುವನು ಗುರುದೇವನೆಂದ ರೀತಿ ನಡೆಯೆ
ದೇವನೊಲಿದನೆಂದಮಾತ್ರಕೆ—ಸಮಸ್ತ ಸೌಖ್ಯ
ತೀವಿಬಹುದು ಮನುಜ ಕುಲಕೆ ॥ ೯ ॥

## ಒಂಭತ್ತನೆಯ ಸಂಧಿ

### ಭಾರತೀಯ ಸಂಸ್ಕೃತಿ

ಎಲ್ಲ ಜಗವ ಕಂಡವರು ಎಲ್ಲ ವಿಷಯ ತಿಳಿದವರು
ಬಲ್ಲೆವೆನರು ಅಲ್ಪ ವಿದ್ಯೆಯ—ಮಾನವರಿಗೆ
ಎಲ್ಲಿಲ್ಲದ ಹಮ್ಮು ಕಂಡೆಯ ॥ ೧ ॥

ಲೋಕನಾಯಕನ ದಯದಿ ಲೋಕಕೆ ರಕ್ಷಣೆಯುಂಟು
ಲೋಕಮನುಜರೇನಗೈವರು—ಬರಿದೆ ಗರ್ವ
ಸೋಕಿ ತಮ್ಮಿಂದಾಯಿತೆಂಬರು ॥ ೨ ॥

ಹೃದಯ ಕ್ರಿಯೆ ನಡೆವ ತನಕ ಮದಿಸಿದಾನೆಯಂತೆ ಮೆರೆದು
ತುದಿಗೆ ಮರಣವೆದುರು ನಿಲ್ಲಲು—ಭಯ ಬೀಳುತಲಿ
ಮುದುರಿಕೊಳ್ವರೀ ಕುಜನಗಳು ॥ ೩ ॥

ಹಿಂದೂಗಳು ನಾವುಯೆಂದು ಹಿಂದೂ ಧರ್ಮ ಪಾಲಿಸದೆ
ಹಿಂದು ಮುಂದು ಒಂದು ನೋಡದೆ—ತಮ್ಮಿಷ್ಟದಂತೆ
ಮುಂದೆ ನುಗ್ಗಿ ಮುಗ್ಗರಿಸುವುದೆ ? ॥ ೪ ॥

ಮುಂದುವರಿಯುತಿರ್ಪೆವೆಂದು ಹಿಂದಕೆ ಹಿಂದಕೆ ಬಿದ್ದು
ಹಿಂದುಮುಂದಾಗುತ ಬಾಳಲಿ—ಸುಖಿಸದೆ ಬಲು
ತೊಂದರೆಗೀಡಾದರಿಳೆಯಲಿ ॥ ೫ ॥

ಭಾರತ ಸಂಸ್ಕೃತಿಯೆಲ್ಲಿ ಭಾರತ ಧರ್ಮಗಳೆಲ್ಲಿ
ಭಾರತದಿತಿಹಾಸ ತಾನೆಲ್ಲಿ—ಭಾಗವತ ಗೀತ
ಭಾರತ ರಾಮಾಯಣವೆಲ್ಲಿ ? ॥ ೬ ॥

ವೇದೋಪನಿಷತ್ತುಗಳ ಬೋಧೆಯೆಲ್ಲಿ ವಿವಿಧ ಶಾಸ್ತ್ರ
ಸಾಧನ ಜ್ಞಾನವು ತಾನೆಲ್ಲಿ—ಸುಜ್ಞಾನ ಭಕ್ತಿ
ಸಾಧಕರ ಸಾಹಿತ್ಯವೆಲ್ಲಿ ? ॥ ೭ ॥

ಶಿಕ್ಷಿತ ಸಮಾಜವೆಲ್ಲಿ ಶಿಕ್ಷಣ ಸಮಾಜಕೆಲ್ಲಿ
ರಕ್ಷಣೆ ಪ್ರಜೆಗಳಿಗೆ ತಾನೆಲ್ಲಿ–ದರಿದ್ರ ದೀನ
ಪಕ್ಷಗಳುಪಕಾರಿಗಳೆಲ್ಲಿ ॥ ೮ ॥

ಹಿಂದಿನೆನ್ನ ಭಾರತದ ಸಂದ ಕೀರ್ತಿಧ್ವಜವದೆಲ್ಲಿ
ಸುಂದರ ಜೀವನ ನಡೆಸಿದ–ನಮ್ಮ ಪೂರ್ವಜ
ರೆಂದ ನುಡಿಗಳೆಲ್ಲಿ ಚೆಂದದ ॥ ೯ ॥

ಹೇಗೆ ನರರು ಬಾಳಿ ಬದುಕಿ ಸಾಗಿಸಬೇಕೀ ಜೀವನ
ಹೇಗೆ ಶಾಂತಿ ಸತ್ಯಪಾಲನೆ–ಹೇಗೆ ಸುಭಿಕ್ಷ
ಹೇಗೋ ಹೇಳಬೇಕಾ ದೇವನೆ ॥ ೧೦ ॥

ದಾರಿ ತೋರಿಸುವರಿಲ್ಲ ದಾರಿ ತಪ್ಪಿ ನಡೆವರೆಲ್ಲ
ಸಾರಸೌಖ್ಯ ಸಾಧನೆಯಿಲ್ಲ–ಭಾರತದ ಕ್ಷೇಮ
ಭಾರವನಾ ದೇವನೆ ಬಲ್ಲ ॥ ೧೧ ॥

# ಹತ್ತನೆಯ ಸಂಧಿ

## (೧) ಜಗದ್ವ್ಯಾಪಾರ ವೈಭವ

ಶ್ರೀರಮಣ ಸೃಷ್ಟಿಸಿಹ ನೀರಜಭವಾಂಡದೊಳಗೆ
ಮಾರವೈರಿ ಮುಖ್ಯ ದೇವರು–ಹೊಣೆಗಳ ಹೊತ್ತು
ಕಾರ್ಯಗಳ ಮಾಡುತಿಹರು ॥ ೧ ॥

ಕಾದುಕೊಳ್ಳುವನು ದೇವ ಸಾಧು ಸಂತ ಶರಣರನ್ನು
ಮೇದಿನೀ ಭಕ್ತರ ಸಂತತ–ಮಾಧವ ಬೇಗ
ಭೂದೇವಿ ಮೊರೆಗಳನು ಕೇಳುತ ॥ ೨ ॥

ಒಬ್ಬರಿಗೊಂದೊಂದು ಕೆಲಸ ತಬ್ಬಿಬ್ಬಿಗವಕಾಶವಿಲ್ಲ
ಅಬ್ಬರದಧಿಕಾರವೇನಿಲ್ಲ–ದೇವತೆಗಳೆಲ್ಲ
ಒಬ್ಬರಿಗೊಬ್ಬರು ಪ್ರಿಯರೆಲ್ಲ ॥ ೩ ॥

ಎಲ್ಲ ದೇವರೆಂದೆಂದಿಗೂ ಫುಲ್ಲಲೋಚನನಧೀನ
ರೆಲ್ಲರವನಿಗೆ ಪ್ರಿಯರು–ವಿಧೇಯರು ತಾ
ವೆಲ್ಲರಾತನಾಜ್ಞೆ ಮೀರರು ॥ ೪ ॥

ಅತಿಶಯದ ಮಾತಿದಲ್ಲ ರತಿಪತಿ ಜನಕನೆ ಜಗ
ತ್ಪತಿಯಾತನ ಸಂಕಲ್ಪದಂತೆ–ಲೋಕದ ಚಕ್ರ
ಗತಿಯು ನಡೆಯುತಿಹುದೆಂದಿನಂತೆ ॥ ೫ ॥

ಪಕ್ಷಿ ಮೃಗ ಜೀವಜಂತು ವೃಕ್ಷವಾದಿಯಾದ ಲಕ್ಷ
ಲಕ್ಷ ಲಕ್ಷ ಜೀವಕೋಟಿಯ–ಕಾರುಣ್ಯದಿಂದ
ಪಕ್ಷಿತುರಗ ರಕ್ಷಿಪನೈಯ ॥ ೬ ॥

ಲಕ್ಷಿಸನು ಕೇಳು ನಮ್ಮ ಲಕ್ಷ್ಮೀರಮಣ ದುಷ್ಟರನು
ಪೇಕ್ಷೆಗೈದು ಸಜ್ಜನರನು–ಎಂದೆಂದು ತಾನು
ಕುಕ್ಷಿಯೊಳಗಿಟ್ಟು ಪೊರೆವನು ॥ ೭ ॥

ಕೆಟ್ಟ ಜನರನು ತಾನು ಮೆಟ್ಟಿ ಸೀಳುವನಾತನ
ಸಿಟ್ಟಿಗಿಳೆ ಸುಟ್ಟುಪೋವುದು–ಮಾನವ ಕುರಿಗ
ಛಟ್ಟಿಹಾಸವೆಂತು ನಡೆವುದು ॥ ೮ ॥

ಪರಮಾತ್ಮನಮುಂದೆ ನಮ್ಮ ನರಚೇಷ್ಟೆಗಳು ನಡೆಯುವಯ್ಯ
ಪರಮೇಷ್ಠಿ ಜನಕನ ನಂಬುವ–ಮಾನವರಿಗೆಲ್ಲ
ಸರುವ ಸೌಖ್ಯವಿತ್ತು ಪೊರೆಯುವ ॥ ೯ ॥

ಮರೆಯಲೆಂತು ಮನವುಬಹುದು ಹರಿಯನೊಳಹೊರಗೆ ಜಗದ
ಸರುವ ಸ್ಥಳದೊಳಿದ್ದು ಕಾವನ–ನಮ್ಮ ನೋಳ್ಪನ
ಪರಮ ಕರುಣಿ ದಾಸರೊಡೆಯನ ॥ ೧೦ ॥

## (೨) ಆಸ್ತಿಕ ಮನೋಭಾವ

ನೀಚ ಬುದ್ಧಿಗಳನು ಬಿಟ್ಟು ನಾಚಿಕೆ ಪಡದೆ ನಿತ್ಯ
ಯಾಚಿಸು ಶ್ರೀಹರಿಯ ಭಕ್ತಿಯ–ಸದ್ಗುರುವು ನಿನಗೆ
ಸೂಚಿಸಿ ಬೋಧಿಸಿದ ಪರಿಯ ॥ ೧೧ ॥

ಶೋಚನೀಯ ನಿನ್ನ ಪರಿ ಯೋಚನೆ ಸಾಗದೊ ನಿನ್ನ
ಈ ಚರಾಚರದ ರಕ್ಷಕ–ಶ್ರೀಪತಿ ಭವ
ಮೋಚಕನೆಂದರಿಯುವನಕ ॥ ೧೨ ॥

ಒಳಗೆ ಇರುವ ವಿಷ್ಣು ತಾನು ಗಳಿಗೆ ಗಳಿಗೆಗೆ ವಿವೇಕ
ತಿಳಿಸಿ ಗುರುವ ನಿನ್ನ ಸೌಖ್ಯಕೆ–ಸೂಚಿಸಿದರು
ಛಲದಿ ನೀನು ಕೆಡುವೆಯೇತಕೆ ॥ ೧೩ ॥

ದಾರಿದೀಪವಿಟ್ಟು ನಮಗೆ ತೋರಿ ಗುರಿಯ ಹಿರಿಯರೆಲ್ಲ
ಸಾರಿಹರು ಮುಂದು ಮುಂದಕೆ–ಪುಣ್ಯದ ಭೂಮಿ
ಭಾರತದಿ ಯುಗ ಯುಗಕೆ ॥ ೧೪ ॥

ಎನಿತು ಕೋಟಿ ಕೋಟಿ ಜನರು ಎನಿತು ಜನುಮ ಜನುಮಗಳಲಿ
ಎನಿತು ಕರ್ಮವೆಸಗಿ ಫಲಗಳ–ಪಾಪ ಪುಣ್ಯವ
ನನುಭವಿಸಿದರು ತಿಳಿಯೆಲ || ೧೫ ||

ದೊಡ್ಡವರು ನಡೆದು ತೋರ್ದ ದೊಡ್ಡದಾರಿ ತಪ್ಪಬೇಡ
ದೊಡ್ಡವರ ನಿಂದಿಸಬೇಡ–ಜೀವನವನು
ಹೆಡ್ಡನಂತೆ ಸಾಗಿಸಬೇಡ || ೧೬ ||

ಗುರುಗಳಿಲ್ಲವೆನಬೇಡ ಹಿರಿಯರಿಲ್ಲವೆನಬೇಡ
ಪರಮಾತ್ಮನೆ ನಾನೆನ್ನಬೇಡ–ಕೃತಘ್ನನೆನಿಸಿ
ಧರಣಿಯೊಳು ಮೆರೆದು ಕೆಡಬೇಡ || ೧೭ ||

ವಕ್ರ ಬುದ್ಧಿಯಿಂದ ನೀನು ಅಕ್ರಮವಾಗಿಯೆ ನಿನ್ನ
ವಿಕ್ರಮವ ತೋರಬಯಸಲು–ತಪ್ಪದು ಕಷ್ಟ
ಚಕ್ರಧರನ ಮರೆತು ಸುಖಿಸಲು || ೧೮ ||

## ಹನ್ನೊಂದನೆಯ ಸಂಧಿ

### ವಿಧಿಯ ನಿತ್ಯ ಪರೀಕ್ಷೆ

ಓದು ಮಾತು ಬಂದ ಮಾತ್ರಕಾದಿಲ್ಲ ಜನ್ಮ ಧನ್ಯ
ಸಾದರದಿ ನಡೆದು ಪೇಳ್ವುದು—ಜನರಿಗೆ ತಾನು
ಮಾದರಿ ಮಾರ್ಗವ ತೋರ್ಪುದು ॥ ೧ ॥

ಹಲವು ಓದನೋದಿದಾಗ್ಯೂ ಫಲವೇನಯ್ಯಬಹುದು ಸುಕೃತ
ಗಳಿಸಿ ಪರರ ಸುಖಕೆ ಸ್ವಾರ್ಥವ—ತ್ಯಜಿಸದವನು
ಖಳನಲ್ಲದೆ ಗಣ್ಯನೇನವ? ॥ ೨ ॥

ನಿತ್ಯ ವಿದ್ಯಾಭ್ಯಾಸ ನರಗೆ ನಿತ್ಯವೂ ಪರೀಕ್ಷೆಯವಗೆ
ನಿತ್ಯದನುಭವದ ಮಾಲೆಯು—ಸುಖದುಃಖಗಳ
ಕರ್ತವ್ಯ ನಿರ್ವಹಣೆಯಲ್ಲಿಯೆ ॥ ೩ ॥

ತಿಳಿದು ನೋಡೆ ಬಾಳಗುಟ್ಟು ತಿಳಿದವಗೆ ತಿಳಿಯದವನಗೆ
ತಿಳಿದೂ ತಿಳಿಯದವರೆಲ್ಲರಿಗೆ—ಪರಿಪರಿಯಲಿ
ಬಲು ಪರೀಕ್ಷೆ ಕ್ಷಣಕೆ ಗಳಿಗೆಗೆ ॥ ೪ ॥

ಓದಿಗೆ ಪರೀಕ್ಷೆಯೆಂಬ ವಾದದೊಳು ಸತ್ಯವುಂಟೆ
ಓದಿದವಗೋದದವನಿಗೆ—ಎಲ್ಲರಿಗೂ ವಿಧಿ
ಶೋಧನೆ ಪರೀಕ್ಷೆಯವರಿಗೆ ॥ ೫ ॥

ಕಾಲನೂಕಿ ಬದುಕುವುದು ಬಾಳಿಗೆ ತರವಲ್ಲವೆಂದು
ಶೂಲದಿಂದ ನೀನೇ ನಿನ್ನನು—ಇರಿದುಕೊಂಡಂತೆ
ಕೇಳು ಹಿರಿಯರ ಬುದ್ಧಿ ಮಾತನು ॥ ೬ ॥

ಏನ ಕಳೆವರು ಕಾಲಮಾನದಿ ತನ್ನಾಯುವನ್ನು
ಮಾನವನು ವ್ಯರ್ಥ ಕಳೆವುದು—ಅಪರಾಧವೆಂದು
ಜ್ಞಾನಿಗಳ ಮತವು ಪೇಳ್ವುದು ॥ ೭ ॥

ಶಿರದಿ ಮಾನ್ಯ ಮಾಡುವಂಥ ಪರಮ ಜನವಾಣಿ ಕೇಳು
ಪರಮ ಧರ್ಮವಹಿಂಸೆಯೆಂದು—ಸಾರಿರಲಾಗಿ
ಪರಮತದ ವೈರವೇಕೆಂದು ॥ ೮ ॥

ಆಶೆಯೇ ದುಃಖಕೆ ಮೂಲವಾಶೆಯಿಂದ ಜನನ ಮರಣ
ಆಶೆ ಬಿಡಲು ಬುದ್ಧನಹನೆಂದು—ಸಿದ್ಧಾರ್ಥನೃಪ
ದೇಶಿಸಿದುದ ಮರೆವರೆ ಇಂದು ॥ ೯ ॥

ಶಿವನ ಭಕ್ತ ಕೋಟಿಯು ಕೇಶವನ ಭಕ್ತ ಕೋಟಿಯು ನ
ಮ್ಮವನಿಯಲಿ ನಡೆದ ರೀತಿಯು—ಅವರ ಚರಿತ್ರೆ
ಯವಲೋಕನವೆಮಗೆ ಮಾದರಿಯು ॥ ೧೦ ॥

ತನು ಸೌಖ್ಯವ ಬಯಸುವಂತೆ ಮನ ಸೌಖ್ಯವ ಬಯಸಿರೆಲ್ಲ
ಜನಮನ್ನಣೆ ಗಳಿಸಿ ಸತ್ಯದಿ—ಬಾಳಿರಿಯೆಂಬ
ವಿನಯ ನುಡಿಗಳುಂಟೇ ಪದದಲಿ ॥ ೧೧ ॥

## ಹನ್ನೆರಡನೆಯ ಸಂಧಿ

### ಲೋಕ ಪೂಜ್ಯರು

ಹಿತವ ಬೋಧಿಸುವ ಹಿರಿಯ ಪಥವ ತೋರಿಸುವ ಗುರು
ಮತಿಯನೆಚ್ಚರಿಪ ಕಬ್ಬಿಗ–ಲೋಕಕೆ ಇವರು
ಪ್ರತಿಕ್ಷಣಕು ವಂದ್ಯರಾವಗ || ೧ ||

ದೇಶಕಾಗಿ ದುಡಿವ ಮಡಿವ ಭಾಷೆಗಾಗಿ ದುಡಿವ ಮಡಿವ
ದೇಶ ಜನರ ಕ್ಷೇಮ ಸಾಧನೆ–ಗೈಯ್ವುದೆ ಸಾಕ್ಷಾ
ದೀಶಗೆ ನೀ ಮಾಳ್ಪಾರಾಧನೆ || ೨ ||

ನಿರ್ಮಲದ ಹೃದಯದ ಧರ್ಮವರಿತು ನಡೆಯುವವ
ಕರ್ಮಯೋಗಿಯೆನಿಪ ಮನುಜನು–ನಿಷ್ಕಾಮ ಸೇವೆ
ಮರ್ಮವನರಿತ ಸುಜನನು || ೩ ||

ಕನಸು ಮನಸಿನಲ್ಲು ನಾಡ ಜನರ ಮೇಲ್ಮೆಗಾಗಿ ಶ್ರಮಿಪ
ಜನುಮವಿತ್ತ ತಾಯಿನಾಡಿನ–ಕೀರ್ತಿಯ ಮೆರೆವ
ಮನುಜನವನೆ ತಿಳಿಯೊ ಪಾವನ || ೪ ||

ಜಂಗಮಸ್ಥಾವರ ಜಗದಿ ಲಿಂಗವನೊಲಿಸುವ ಪರಿ
ಜಂಗಮರ ಸೇವೆಯಿಂದಲಿ–ಎಂಬುವ ತತ್ವ
ಲಿಂಗಾಂಗಿಗಳೆಲ್ಲ ತಿಳಿಯಲಿ || ೫ ||

'ಅಲ್ಲಾ 'ನ ಸೃಷ್ಟಿಯೊಳವನಿಗೆಲ್ಲ ಜನರು ಮಕ್ಕಳೆಂದು
ಎಲ್ಲ ಜೀವರೊಳು ಸೋದರ–ಸ್ನೇಹವ ದೃಷ್ಟಿ
ಚೆಲ್ಲಲೆಂದು ಮಹಮದೀಯರ || ೬ ||

ಶಿಸ್ತು ಶುಚಿ ಸತ್ಯ ನಿಷ್ಠೆ ವಸ್ತು ವಿಷಯ ವಿವೇಚನೆ
ವಾಸ್ತವ ಸಂಗತಿ ಬೋಧನೆ–ಹೆಚ್ಚುತ ಬರಲಿ
ಕ್ರಿಸ್ತನೊರೆದ ಶಾಂತಿ ಪಾಲನೆ || ೭ ||

ಆ ಶಿವನ ಸೃಷ್ಟಿ ಬೇರೆ ಕೇಶವನ ಸೃಷ್ಟಿ ಬೇರೆ
ಏಸುವಿನ ಸೃಷ್ಟಿ ಬೇರೆಂದು–ಪರ ಮತಗಳ
ದೂಷಿಪುದು ಸರಿಯೆ ನಾವಿಂದು ? ॥ ೮ ॥

ಹಲವು ಹತ್ತು ನೂರು ಜಾತಿ ಹಲವು ಜನರ ಮತದ ರೀತಿ
ಹಲವು ಮಹಿಮರಭಿಪ್ರಾಯವು–ಅನುಭವ ನೀತಿ
ಹಲವು ದರ್ಶನಗಳ ಸಾರವು ॥ ೯ ॥

ತಮ್ಮ ತಮ್ಮ ಮತದ ಬೋಧೆ ಧರ್ಮ ಕರ್ಮ ಮರ್ಮವರಿತು
ತಮ್ಮ ಗುರುವು ತೋರ್ದ ಹಾದಿಯ–ಹಿಡಿದು ನಡೆಯೆ
ತಮ್ಮ! ನಿನಗೆ ಏನು ಅಪಾಯ ? ॥ ೧೦ ॥

ಈ ಮತವೇ ಶ್ರೇಷ್ಠವೆಂದು ಆ ಮತ ಕನಿಷ್ಠವೆಂದು
ಛೀಮಾರಿಗೈಯುತಲನ್ಯರ–ಮತಗಳ ಜರಿವ
ತಾಮಸಿಗಳನಟ್ಟು ಬಹುದೂರ ॥ ೧೧ ॥

ಜನರಿಗಾಗಿ ಮಾಳ್ಪ ಸೇವೆ ಜನತಾ ಜನಾರ್ದನನ ಸೇವೆ
ಜನ ಮೆಚ್ಚೆ ಜನಾರ್ದನನೊಲಿವ–ನೆಂಬುವ ಮಾತು
ಜನಜನಿತವಲ್ತೆ ಮಾನವ! ॥ ೧೨ ॥

## ಹದಿಮೂರನೆಯ ಸಂಧಿ

### ಬೇವು-ಬೆಲ್ಲದ ಬಾಳು

ಆವ ಘಳಿಗೆಗೇನೊ ಎಂತೊ ಆವನು ಬಲ್ಲನು ಲೋಕ
ಜೀವನ ನಾಟಕರಂಗದಿ–ಪಾತ್ರವು ಮುಗಿಯೆ
ಜೀವರೆಲ್ಲಿಹರು ಜಗದಿ ? ॥ ೧ ॥

ಸಾವು ನೋವು ತಪ್ಪಲೆಂತು ನಾವು ನಿವಾರಿಸಲಳವೆ
ದೇವದೇವನಧೀನವಿದು–ಟೀಕೆಯ ಮಾಡೆ
ನಾವಾರು ? ನಮಗೇನು ತಿಳಿವುದು ? ॥ ೨ ॥

ಕಾಲವಶರಾದ ನಾವು ಕಾಲವನ್ನು ಗೆಲ್ವೆವೆಂದು
ಕಾಲವೆಮ್ಮಾಧೀನವೆನ್ನುತ–ಬಿಡುವೆವು ತನುವ
ಕಾಲಾಧೀನರಾಗಿ ಪೋಗುತ ॥ ೩ ॥

ಸಂಕಟವು ಬರಲಾಗ ವೆಂಕಟರಮಣನ ಧ್ಯಾನ
ಮಂಕು ಕವಿದು ಮತಿವಿಭ್ರಮಣೆ–ಸುಖವನು ಕಾಂಬಾ
ತಂಕ ತವಕ ದೇವತಾರ್ಚನೆ ! ॥ ೪ ॥

ಜೀವಮಾನದವಧಿಯಲ್ಲಿ ಬೇವು-ಬೆಲ್ಲದನುಭವಗಳು
ತೀವಿ ಬಂದು ನರರ ತಿದ್ದುತ–ಲಿರ್ದರೂ ಕೆಟ್ಟ
ಭಾವನೆಗಳಲ್ಲಿ ಮುಳುಗುತ ॥ ೫ ॥

ತನ್ನದೇ ಎಲ್ಲವು ಎಂದು ತನ್ನದೇ ಹಠವ ಮಾಡಿ
ಮುನ್ನುಗ್ಗುತಲವಿವೇಕದಿ–ಮಾನವ ತನ್ನ
ಜನ್ಮ ವ್ಯರ್ಥಗೊಳಿಪನಂತ್ಯದಿ ॥ ೬ ॥

ದೇವರ ಮಾಯೆಯು ಜಗದ ಜೀವರನಾವರಿಸುತ
ಯಾವ ಪರಿಯಲಿ ನಮ್ಮನು–ಪರಿಕಿಪುದೆಂದು
ನಾವು ತಿಳಿಯಲಿಲ್ಲವೇಕಿನ್ನು ? ॥ ೭ ॥

ಅವುದು ವಿವೇಕ ಮಾರ್ಗ ಅವುದವಿವೇಕ ಮಾರ್ಗ
ಭಾವವಿದು ಸ್ಪಷ್ಟ ತೋರದೆ–ಜೀವನದನು
ಭಾವಗಳ ನಾವು ಮರೆವುದೆ ? || ೮ ||

ಹೇಯ ವಿಷಯಗಳಿಗೆ ಹೇಸಿ ನ್ಯಾಯ ಮಾರ್ಗದಲ್ಲೇ ನಡೆವು
ಪಾಯವರಿತು ನಿರ್ಮತ್ಸರದಿ–ಬದುಕುವರಿಗ
ಪಾಯವೆಲ್ಲುಂಟವರ ಜೀವನದಿ ? || ೯ ||

ಓದು ಬಹಳವಿಲ್ಲದಾಗ್ಯೂ ಭೇದ ಬುದ್ಧಿಗೈಯದೆ ವಿ
ನೋದದಿಂದ ಸರಸಭಾವದಿ–ಜೀವನಗೈವ
ಮೋದಿಯು ತಾ ಧನ್ಯ ಜಗದಿ || ೧೦ ||

ಇದ್ದುದರಲಿ ಉಂಡು ಉಟ್ಟು ಸದ್ದಿಲ್ಲದೆ ಹೃದಯದಲಿ
ಮುದ್ದು ಕೃಷ್ಣನನ್ನು ನೆನೆವನು–ತಾನೆಂದೆಂದಿಗೂ
ವರ್ಧಿಸುವ ಶಶಿಯಂತವನು || ೧೧ ||

ಪರಿಭವಂಗಳಿಲ್ಲವವಗೆ ಪರಿಶುದ್ಧಾಂತಃಕರಣನವಗೆ
ಪರಿಪರಿಯಭೀಷ್ಟವೆಲ್ಲವು–ನೆರವೇರುತಿಹವು
ಹರಿಯ ದಯದಿ ಸಟೆಯಿದಲ್ಲವು || ೧೨ ||

ಜೀವಮಾನದಲಿ ನಿಮ್ಮ ಜೀವನಾನುಭವಗಳೆ
ದೇವದೇವನಿಗೆ ಒಪ್ಪಿಸಿ–ಅನುದಿನದಲಿ
ಜೀವನ ರಥವ ನಡೆಸಿ || ೧೩ ||

## ಹದಿನಾಲ್ಕನೆಯ ಸಂಧಿ

### ಮಾನವ ಶ್ರೇಷ್ಠ ಜೀವಿ

ಹಸಿವು ನಿದ್ರೆ ನೀರಡಿಕೆ ಪಶು ಪಕ್ಷಿ ಪ್ರಾಣಿಗಳಿಗೆ
ವಶವಲ್ಲ ತಪ್ಪಿಸಲಾರಿಗೂ—ಸಾವನು ಗೆದ್ದ
ಅಸಮವೀರನಿಲ್ಲವಿಂದಿಗೂ ॥ ೧ ॥

ಆಲಸ್ಯ ರುಜಿನ ರೋಗ ತಾಳಲಾರದಂಥ ನರ
ಕಾಲ ಮರ್ಮವೆಂತು ತಿಳಿವನು ?—ಇಂತಿರ್ದು ತಾನು
ಕಾಲ ದೇಶ ಗೆಲ್ವೆನೆಂಬನು ! ॥ ೨ ॥

ಬಿರುಬಿಸಿಲು ಮಳೆ ಚಳಿ ಬರಲು ತತ್ತರಿಸುವವ
ಧರಣಿಯಾಳ್ವೆನೆಂಬ ದರ್ಪವ—ನೋಡಿರೀತನ
ಪರಿ ವಿಚಿತ್ರತರದ ಭಾವವ ! ॥ ೩ ॥

ಆಕರ್ಷಣೆ ಬಹಳವುಂಟೇ ಲೋಕದಲಿ ಜೀವರಿಗ
ನೇಕ ಪರಿ ಮನವ ಸೆಳೆದು—ಪಾಪ ಕರ್ಮಕೆ
ನೂಕಿ ಮಾಯೆ ನಕ್ಕುನಲಿವುದು ॥ ೪ ॥

ಹೆಣ್ಣಿನಾಸೆ ಹೊನ್ನಿನಾಸೆ ಮಣ್ಣಿನಾಸೆಯೆಂಬ ಮೂರು
ಹಣ್ಣುಗಳಾಸೆಗೆ ಸಿಲುಕಿಸಿ—ಪರಿಕಿಸುವುದು
ಕಣ್ಣು ಬಾಯಿಗಳನು ಬಿಡಿಸಿ ॥ ೫ ॥

ಪ್ರಕೃತಿ ನೀತಿ ನಿಯಮಬದ್ಧ ಪ್ರಕೃತಿ ದೈವಾಧೀನ ಸಿದ್ಧ
ಪ್ರಕೃತಿ ಯಾಕೆ ಮಡಿಲೊಳು ಬಿದ್ದ—ನರ ಹುಳುವಿವನು
ಪ್ರಕೃತಿ ಮೀರೆ ಮೃತ್ಯುವೇ ಸಿದ್ಧ ! ॥ ೬ ॥

ಧರ್ಮ ಕರ್ಮ ಸಂಯೋಗದ ಮರ್ಮವತಿ ಸೂಕ್ಷ್ಮವಿದ
ನಿರ್ಮಲಾಂತಃಕರಣದಿಂದಲಿ—ವಿವೇಚಿಸುತ್ತ
ನಿರ್ಮಮತೆ ಮಾರ್ಗವ ತುಳಿ ॥ ೭ ॥

ಪೂರ್ಣಚಂದ್ರನೊಂದೇದಿನ ಹುಣ್ಣಿಮೆಯಲಿ ನಗುವನಲ್ತೆ
ಕ್ಷೀಣಿಸುತ್ತ ಬರನೆ ದಿನ ದಿನ ? ಅಂತೆಯೆ ಬಾಳ
ಹಣ್ಣು ಸವಿಯು ನರನಿಗೊಂದಿನ || ೮ ||

ಹ್ರಾಸವೃದ್ಧಿಯೇನೇ ಬರಲಿ ಹಾಸವದನನಾಗಿ ಕಾಂತಿ
ಸೂಸಿ ಸದಾ ಶಾಂತನಿಪ್ಪಂತೆ–ಇಂದುವಿನಂತೆ
ತೋಷ ಮನದಿ ಬದುಕಬೇಕಲ್ತೆ ! || ೯ ||

ಮಾನವನ ಜನ್ಮವೆ ನವೀನತೆಯು ತಾಳಿಹುದು
ಮಾನವನೆ ಶ್ರೇಷ್ಠ ಜೀವಿಯು–ಪ್ರಾಣಿಗಳಲ್ಲಿ
ಜಾಣ ಬುದ್ಧಿ ಮಾತಿನಲ್ಲಿಯು || ೧೦ ||

ಪಂಚ ಭೂತಾತ್ಮಕದ ದೇಹ ವಂಚಿಸುತ ನರನ ಮತಿಯ
ಚಂಚಲಗೊಳಿಸಿ ಕೆಡಿಪುದು–ವಿಷಯ ಸುಖಕೆ
ಸಂಚುಮಾಡಿ ಕಷ್ಟ ಕೊಡುವುದು || ೧೧ ||

ಹೆದರದೆ ಸಂಸಾರದಲ್ಲಿ ಉದುಭವಿಪ ದುಃಖ ತೆರೆಯು
ಪದರಗಳೊಂದೊಂದ ಧೈರ್ಯದಿ–ದಾಟಲು ಬೇಕು
ಪದುಮಿನೀವಲ್ಲಭನ ದಯದಿ || ೧೨ ||

ಯಾವ ಕುಲ ಯಾವ ಜಾತಿ ಯಾವ ಕರ್ಮ ಸಂಪ್ರದಾಯ
ದೇವನಿಗೆ ಅಡ್ಡಿ ಬಾರದು–ಆತನ ಸದಾ
ಭಾವಿಸುತ ನಾವು ಭಜಿಪುದು || ೧೩ ||

# ಹದಿನೈದನೆಯ ಸಂಧಿ

## ಕಲಿಕಲ್ಮಷ ಚಿತ್ತರು

ಲೋಕಚರ್ಯೆ ಜನರೊಳನೇಕಪರಿ ಕಲಿಯುಗದಿ
ಐಕಮತ್ಯವೆಂಬುದಿಲ್ಲವು–ಸತ್ಕರ್ಮಾಸಕ್ತಿ
ಕಾಕುನರರಿಗೆಂತು ಬರ್ಪವು ॥ ೧ ॥

ಜೋಕೆಯಿಂದ ಬದುಕ ನಡೆಸಿ ನೂಕಬೇಕು ದಿನವನೆಂಬ
ಶ್ಲೋಕ ಪುಣ್ಯರೊರೆದ ಸಂಗತಿ–ವಿಚಾರವೆಲ್ಲ
ಸೋಕದಾಯ್ತು ನರರಿಗೀಗತಿ ॥ ೨ ॥

ನೀತಿ ನಿಯಮ ಬಿಟ್ಟು ಜನರು ಕೋತಿಯಂತೆ ಕುಣಿದು ಪಾಪ
ಭೀತಿ ತೊರೆದು ನಡೆಯುತಿರುವರು–ತಾವಾಡಿದುದೆ
ಸೂಕ್ತವೆಂದು ಗಳಹುತಿರುವರು ॥ ೩ ॥

ಕಲಿಯಧರ್ಮಕಾಲದಲ್ಲಿ ಕುಲವ ಬಿಟ್ಟು ಬಹಳೆ ಜನರು
ಕಲುಷ ಮನದಿ ಕೊಳೆಯುತಿರ್ಪರು–ಗುರು ಹಿರಿಯರ
ಒಲುಮೆಗೆ ಬಾಹಿರರಾದರು ॥ ೪ ॥

ದೇವ ದೇವನ ಸೃಷ್ಟಿಯೊಳು ಜೀವನ ಸಮಸ್ಯೆಗಳ
ಜೀವನ ಹೊಣೆಗಳನವರು–ತಿಳಿಯದೆ ತಮ್ಮ
ಜೀವನವ ವ್ಯರ್ಥಗೊಳಿಪರು ॥ ೫ ॥

ಕಲಿತ ವಿದ್ಯೆ ಗರ್ವಮೂಲ ಬಲಿತಮೇಲೆ ಬಿಡುವುದೆಂತು
ಮಲಿನ ಮನರು ಕುಜನ ಸಂಗದಿ–ನೆರೆದಾಡುವರು
ತಿಳಿದ ಜನರ ಕಂಡಲಕ್ಷ್ಯದಿ ॥ ೬ ॥

ಮಾಡಿದುಪಕಾರಗಳನಾಡಿ ಸ್ಮರಿಸರೆಂದೆಂದಿಗು
ಕೇಡನೇ ಬಯಸುತಲವರಿಗೆ–ಕೃತಘ್ನರೆಂತು
ರೂಢಿಸಿಹರು ಧರಣಿಯೊಳಗೆ ॥ ೭ ॥

ಕಟುಕ ಮನದ ಜನರು ಬಹಳ ಕಟಿಕಿಗಳು ಮನದೊಳಗೆ
ವಿಟರವೋಲು ದಿನವಕಳೆವರು—ಕಂಡಲ್ಲಿ ಹೋಗಿ
ಸಟೆಯನಾಡಿ ಹೊಗಳಿಕೊಂಬರು || ೮ ||

ಶಿಷ್ಟ ಜನರ ಸಂಗವಿಲ್ಲ ಶ್ರೇಷ್ಠವಾದ ನಡತೆಯಿಲ್ಲ
ಇಷ್ಟ ಮಿತ್ರ ಸುಹೃದರಿನ್ನಿಲ್ಲ—ಈ ಪರಿ ಜನಕೆ
ಭ್ರಷ್ಟಮಾರ್ಗ ಗತಿಯಾಯಿತಲ್ಲ || ೯ ||

ಕ್ರೂರ ಮಾನಸರು ದುರಾಚಾರಿಗಳು ದುರ್ಮದಾಂಧ
ರಾರಾರನು ಗಣಿಸರಿವರು—ಮುಂದಿನ ತಮ್ಮ
ಘೋರ ದುರ್ಗತಿಯನು ಎಣಿಸರು || ೧೦ ||

ಹೆತ್ತ ಸುತರ ಮಾರುವರು ಹೊತ್ತ ಹೊಣೆಯ ಲೆಕ್ಕಿಸರು
ಹೆತ್ತವರ ದೂರ ಮಾಳ್ಪರು—ಇಂದಿನ ದಿನದಿ
ಹೆತ್ತವರೊಳು ಹಗೆಯಕಾಂಬರು || ೧೧ ||

ಹುಟ್ಟಿದ ಮಕ್ಕಳು ಬೆಳೆದು ನೆಟ್ಟಿಗಿರದಂತೆ ಹರಿಯು
ಬಿಟ್ಟು ಹೋದ ದಾರಿಯೊಳಗೆ—ಹಿಗ್ಗಿ ನಡೆಹರು
ಕೆಟ್ಟು ನುಡಿ ನಡತೆಯೊಳಗೆ || ೧೨ ||

ಒಡಲೊಳೊಂದು ನುಡಿಯೊಳೊಂದು ನಡೆಯೊಳೊಂದು ತೋರಿಸುತ
ಮಡದಿ ಸುತರನೊಡಹುಟ್ಟಿದರ—ಬಿಡುವರು ತಮ್ಮ
ಹಡೆದವರ ಗುರುಹಿರಿಯರ || ೧೩ ||

ಮಾನವ ಜನುಮದ ಮಹೌಲ್ಯವೇನೆಂಬುದ ಗಣಿಸದಿಂತು
ಶ್ವಾನದಂತೆ ಪ್ರಾಣಿ ಜೀವನ—ಸಾಗಿಸುತಿಹರು
ಜ್ಞಾನಹೀನರಾಗುತೀ ಜನ || ೧೪ ||

# ಹದಿನಾರನೆಯ ಸಂಧಿ

## ಮೂರ್ಖರು ಹಿರಿಯರೆ ?

ನಾರಾಯಣನವತರಿಸಿ ಕ್ರೂರ ಜನರ ನಾಶಪಡಿಸಿ
ಸಾರಸದ್ಧರ್ಮವ ನಿಲಿಸಿದ–ಹಿಂದಕೆ ಇಲ್ಲೆ
ಆರುಂಟೀಗ ಪಾಲಿಸಲಿದ ? ॥ ೧ ॥

ತ್ಯಾಗದ ಯೋಗದ ಭೂಮಿ ಭೋಗದ ಯಾಗದ ಭೂಮಿ
ಕೂಗಿದು ಭಾರತ ವರ್ಷಕೆ–ಒಪ್ಪಿತು ಹಿಂದೆ
ಈಗಾರು ಕೇಳುವರಿದಕೆ ? ॥ ೨ ॥

ಭಕ್ತ ಜನ ಸಾಧು ಜನ ಶಕ್ತ ಜನ ಸಂತ ಜನ
ಮುಕ್ತ ಜನರೆಲ್ಲ ಸಾರಿದ–ತತ್ವಗಳನು
ರಕ್ತಿಯಿಂದ ತಿಳಿವರಾರಿದ ? ॥ ೩ ॥

ಆಸ್ತಿಕರೆಂದೆಂಬರೆಲ್ಲ ನಾಸ್ತಿಕರೆ ಆಗಿಹರು
ಆಸ್ತಿಪಾಸ್ತಿ ಸ್ವಾರ್ಥಕೋಸುಗ–ಹೇಸದ ಕೃತ್ಯ
ವಾಸ್ಥೆಯಿಂದ ಗೈಯುವರೀಗ ॥ ೪ ॥

“ದೇಹಿ” ಎಂಬ ದೀನ ಜನಕೆ ಬೇಹುದನು ಕೊಡುವರಿಲ್ಲ
“ಸ್ವಾಹಾ” ಎಂಬುದೊಂದೆ ಬಲ್ಲರು–ಸರ್ವೇಶನ ದಾ
ಸೋಹ ಭಾವ ವೊಪ್ಪರಿವರು ॥ ೫ ॥

ಹೇಳುವ ಮಾತೊಂದು ತಾನು ಕೇಳುವ ಮಾತೊಂದು ಬೇರೆ
ಹೇಳುವ ಕೇಳುವ ಹಿರಿಯರು–ಇಲ್ಲದೆ ಇವರು
ಹಾಳಾಗಿ ಧೂಳಾಗುತಿಹರು ॥ ೬ ॥

ಹೊಲಸು ಸನ್ನಿವೇಶದಲಿ ಮುಳುಗಿ ಹೀನ ಜನರ ಸಂಗ
ದೊಳಗೆ ತಾವು ಕೆಟ್ಟು ಪರರನು–ಕೆಡಿಸುತಲಿಹರು
ಬಳಿಯ ಸಾಧು ಸಜ್ಜನರನು ॥ ೭ ॥

ಕಾಡು ಹರಟೆ ಕೊಚ್ಚಿ ದುಃಖ ತೋಡಿಕೊಂಡು ಪರರ ಮುಂದೆ
ಹೇಡಿಯಂತೆ ವರ್ತಿಸುವರು–ಈ ಪರಿಯ ಜನರೆ
ನಾಡೊಳಿಂದು ಹೆಚ್ಚುತಿರುವರು ॥ ೮ ॥

ಅನ್ಯರನು ದೂರಿಕೊಂಡು ತನ್ನ ತಾನೇ ಹೊಗಳಿಕೊಂಡು
ಮನ್ನಣೆಗೈಯದೆ ಪರರ–ಸದ್ಗುಣಗಳ
ಮನ್ನಿಸದೆ ಜರಿವರವರ ॥ ೯ ॥

ಮತ್ಸರವನೊಳಗಿಟ್ಟು ವಾತ್ಸಲ್ಯವ ತೋರಿ ಹೊರಗೆ
ಉತ್ಸಾಹಗೆಡಿಸುತ ಜರಿದು–ಕಿರಿಯರ ಕಾಡಿ
ಸತ್ಸಂಗ ಹಳಿವರು ಮುಳಿದು ॥ ೧೦ ॥

ಮೂರ್ಖರಿವರು ಹಿರಿಯರೆ ? ತಾವ್ ನೂರ್ಕಾಲ ಬಾಳಿದರೇನು
ಅರ್ಕಪತ್ರ ರಸವು ಕಣ್ಣಿಗೆ–ಬಿದ್ದಂತೆ ಇವರ
ವಕ್ರ ಬೋಧೆ ಬಾಳು ಮಣ್ಣಿಗೆ ॥ ೧೧ ॥

ಕರುಣವೆನಿತು ತೋರದಂತೆ ಕರುಬಿ ಕೆಟ್ಟ ಮಾತಿನಿಂದ
ಮರೆಮುಚ್ಚಿಲ್ಲದಂತೆ ತಮ್ಮಯ–ದುರ್ಗುಣವ ತಾವೇ
ಧರೆಗೆ ಮೆರೆವರಿದಲೆ ವಿಸ್ಮಯ ! ॥ ೧೨ ॥

ವಿಧಿ ವಿಲಾಸ ಜೀವನದ ಪದರದೊಂದೊಂದಂಕಗಳ
ತುದಿ ಮೊದಲನರಿಯರಿವರು–ಮೂಢ ಮೂರ್ಖರು
ಮದದಿ ನುಗ್ಗಿ ಮುಗ್ಗರಿಸುವರು ॥ ೧೩ ॥

## ಹದಿನೇಳನೆಯ ಸಂಧಿ

### ನಾನು ಯಾರು ? ನನ್ನ ಕೆಲಸವೇನು ?

ಏತಕಾಗಿ ಬಂದೆವಿಲ್ಲಿ ಏತಕಾಗಿ ನಿಂದೆವಿಲ್ಲಿ
ಏತಕಾಗಿ ನಮ್ಮ ಜನ್ಮವು–ಎಂಬುದ ತಿಳಿಯು
ವಾತನ ಬಾಳದು ಸಫಲವು ॥ ೧ ॥

ಆವುದೋ ಜನ್ಮಾಂತರದಿ ಆವುದೋ ಕರ್ಮಾಂತರದಿ
ಈ ವಿಧದಿ ಋಣವ ತೀರಿಸೆ–ಬಂದಿಹೆವೆಂದು
ಸಾವ ಮೊದಲೆ ಯೋಚಿಪುದೈನೆ ॥ ೨ ॥

ಋಣದ ಬಾಧೆ ಬಂಧನವೆ ಜನುಮಗಳೆತ್ತಲು ಮೂಲ
ಋಣದ ರೂಪವೀ ಸಂಸಾರವು–ಸಚರಾಚರದ
ಅಣುಮಹತ್ತುಗಳ ಸಂಯೋಗವು ॥ ೩ ॥

ಯಾರ ಹಂಗು ದಯೆ ದಾಕ್ಷಿಣ್ಯ ಕಾರಣದಿ ಜಗದಿ ನರನು
ಏರಿ ಪದವಿ ಪಡೆದು ಮೆರೆವನೊ–ಅವರ ಋಣವ
ತೀರಿಸಬೇಕೀತನು ಕಾಣೊ ॥ ೪ ॥

ತಾಯಿ ತಂದೆ ಗುರುವು ದೈವ ಜಾಯೆ ಪುತ್ರ ಬಂಧು ಸಖರ
ತಾಯಿನಾಡ ನುಡಿಯ ಮನುಜರ–ಋಣ ತೀರಿಸದು
ಪಾಯವಿಲ್ಲ ಜಾರಲೀ ನರ ॥ ೫ ॥

ಸಾಕೆ ಒಂದು ಜನ್ಮವಿದಕೆ ? ನೂಕುವುದು ಜನ್ಮಾಂತರಕೆ
ಏಕ ಪ್ರಕಾರದಿ ಋಣವ–ತೀರಿಸಲಿಕ
ನೇಕ ಹಿಂಸೆ ತಿಳಿಯೊ ಮಾನವ ! ॥ ೬ ॥

ಋಣಗಳ ತೀರಿಸುವಲ್ಲಿ ಹಣ ಹೊನ್ನಿನ ಪಾತ್ರ ಬಹಳೆ
ಹೆಣಗಿ ಪಾಪಕಾರ್ಯವಾದರು–ಹೇಸದೆ ಮಾಡಿ
ಹಣವ ಗಳಿಸಿ ಋಣವ ಸಲಿಪರು ॥ ೭ ॥

ಈ ಪರಿ ತೀರಿಪ ಋಣ ಪಾಪರೂಪ ತಾಳಿ ನಿತ್ಯ
ತಾಪವ ಭವ ಭವದೊಳಗೆ–ನೀಡುವುದು ನಾನಾ
ರೂಪವ ತಾಳುತಲಿವರಿಗೆ ॥ ೮ ॥

ಋಣ ಕರ್ಮದ ಬಿಡುಗಡೆಯೆ ಮನುಜನಿಗೊಡ್ಡಿದ ಚಿಂತೆ
ಋಣವು ಹರಿಯೆ ಗುಣವೆ ಮುಖ್ಯವು–ನಮ್ಮನು ಕಾವ
ದಣಿಯು ಕೃಪೆಯಿದಕಗತ್ಯವು ॥ ೯ ॥

ಮೋಚಕನಾವನೊ ಭವದ ಮೋಚಕನವನೆ ಋಣದ
ಸೂಚನೆಯಿದನು ತಿಳಿದು–ಈಗಿನಿಂದವನ
ಶ್ರೀಚರಣಂಗಳ ಭಜಿಪುದು ॥ ೧೦ ॥

ಮಾಡು ಭಜನೆ ಪುಣ್ಯ ಕಾರ್ಯ ನೀಡು ದಾನ ಧರ್ಮ ಹರುಷ
ಗೂಡು ಬೇಡು ಕ್ಷೇಮ ಪರರಿಗೆ–ಭೂಷಣ ನಿನಗೆ
ನೋಡು ಸೌಜನ್ಯತೆಯು ಬಾಳಿಗೆ ॥ ೧೧ ॥

ಪರರ ಸುಖಕೆ ನೀನು ಮಾಳ್ಪ ಪರಿಪರಿ ಉಪಕಾರ ಮುಂದೆ
ತರುವುವು ಸೌಭಾಗ್ಯ ನಿನಗೆ–ಈ ಸತ್ಯ ತತ್ವ
ಮರೆಯದಿರು ಕೊನೆಯವರೆಗೆ ॥ ೧೨ ॥

ಋಣವ ಕಳೆದು ಮುಕ್ತರಾಗಿ ಜನುಮ ನೀಗಿ ಸುಖಿಪ ನರರು
ವನಜನಾಭನ ಭಕ್ತರು–ಇವರಲ್ಲದನ್ಯ
ಮನುಜರೆಂತೀ ಗುಟ್ಟನರಿವರು ? ॥ ೧೩ ॥

# ಹದಿನೆಂಟನೆಯ ಸಂಧಿ

## ಸಾಧನ ಸಂಚಯ

ಗಳಿಗೆ ಗಳಿಗೆಗೊದಗಿ ಬರ್ಪ ಹಲವು ಘಟನೆ ಸ್ಥೂಲ ಸೂಕ್ಷ್ಮ
ಜಲಜನಾಭನಾಜ್ಞೆಯೆಂದರಿ—ಅವನಿಚ್ಛೆ ಮೀರಿ
ಹುಲುಕಡ್ಡಿಯು ಚಲಿಸದೆಂದರಿ ॥ ೧ ॥

ಎಷ್ಟು ಹಲವು ಹಂಬಲಿಸ ಕಷ್ಟ ನೀಗಲಾರೆ ನೀನು
ಕೃಷ್ಣನ ಬೋಧೆಯ ಕೇಳೆಲೊ—ತತ್ವವ ತಿಳಿದು
ನಷ್ಟ ದುಃಖನಾಗಿ ಬಾಳೆಲೊ ॥ ೨ ॥

ಈ ಸಮಸ್ತ ಲೋಕಗಳು ಶ್ರೀಶನಿಗಧೀನವೆಂದು
ಈಶನ ದಾಸೆರು ನಾವೆಂದು—ಸಾರಿದ ಹರಿ
ದಾಸರ ವಾಣಿಯ ಕೇಳಿಂದು ॥ ೩ ॥

ಭಕ್ತರ ಚರಿತ್ರೆ ಕೇಳು ಉತ್ತಮರ ಕಥೆ ಕೇಳು
ನಿತ್ಯ ರಾಮಾಯಣ ಭಾರತ—ಭಾಗವತ ಗೀತೆ
ಸೂಕ್ತಿ ಕೇಳಿ ಸುಖಿಸು ಸತತ ॥ ೪ ॥

ಗೀತೆಯನೋದೆಲೊ ಮೂಢ ಮಾತ ಬರಿದೆ ಗಳಹ ಬೇಡ
ನೀತಿ ತಪ್ಪಿ ನಡೆದರೇನುಂಟು? ಭವದ ತಾಪ
ಭೀತಿ ಬಿಡಲುಪಾಯವೆಲ್ಲುಂಟು? ॥ ೫ ॥

ಅನುಭವದಿ ತಿಳಿದುನೋಡು ಅನುಭವದಡುಗೆಯ ಮಾಡು
ಅನುಭವಿಗಳ ಸಂಗದೊಳಾಡು—ಸಜ್ಜನರ ಸತ್ಯ
ದನುಭವ ದರ್ಶನ ನೀ ಮಾಡು ॥ ೬ ॥

ಹನುಮನೊಬ್ಬ ನಾಲದೇನೊ ಮನುಜಗೆ ಸನ್ಮಾರ್ಗ ತೋರೆ
ಜನಕಜಾಕಾಂತನ ಭಜಿಸೆಲೊ—ಪುಣ್ಯವ ಗಳಿಸಿ
ಜನುಮ ಮರಣ ಬಂಧ ನೀಗೆಲೊ ॥ ೭ ॥

ಸೀತಾಪತಿಯ ದಿವ್ಯನಾಮ ಪ್ರೀತಿಯಿಂದ ನೆನೆವ ಭಕ್ತ
ವ್ರಾತಕೆಂದು ಅಸುಖವಿಲ್ಲವೊ—ಇದನು ತಿಳಿದು
ಏತಕಿನ್ನು ಅನುಮಾನವೊ || ೮ ||

ಎಲ್ಲ ಸುಖ ಸಂತೋಷಕಿಂತ ಪುಲ್ಲನಾಭನ ಸ್ಮರಣೆ ಮಿಗಿ
ಲಲ್ಲವೇನೊ ಶಾಶ್ವತಾನಂದ—ದಾಯಕವೊ ಮೇಣು
ಗೆಲ್ಲಿಸುವುದೊ ಭವಬಂಧದಿಂದ || ೯ ||

ಭಕ್ತಿ ಪಾಶದಿಂದ ಸರ್ವಶಕ್ತ ನಿನ್ನ ವಶಕೆ ಬಹನು
ಯುಕ್ತಿಯರಿತು ಪೂಜೆಗೈವುದೊ—ಆಗವನ ಕರುಣ
ಶಕ್ತಿ ನಿನ್ನನನಿಶ ಪೊರೆವುದೊ || ೧೦ ||

## ಹತ್ತೊಂಭತ್ತನೆಯ ಸಂಧಿ

### ಸಣ್ಣವರು–ದೊಡ್ಡವರು !

ದೊಡ್ಡವರ ತೆಗಳಿಕೆಯು ಜಡ್ಡು ಹಿಡಿವ ಹೊಗಳಿಕೆಯು
ಗೊಡ್ಡು ಮಾರ್ಗದಾಚಾರಗಳು–ಇವುಗಳು ಮೂರು
ಅಡ್ಡದಾರಿ ಸಾಧನಗಳು ॥ ೧ ॥

ದಡ್ಡರು ದೊಡ್ಡವರಲ್ಲ ದೊಡ್ಡವರು ದಡ್ಡರಲ್ಲ
ದೊಡ್ಡವರು ದಡ್ಡರಾರೆಂದು–ತಿಳಿವುದೇ ನಮ್ಮ
ದೊಡ್ಡತನ ಜಾಣತನವಿಂದು ॥ ೨ ॥

ಸಣ್ಣವರು ದೊಡ್ಡವರು ಕಣ್ಣಿಗೆ ಕಾಣುವಂತಲ್ಲ !
ಸಣ್ಣ ದೊಡ್ಡತನಕೆ ನಡೆ ನುಡಿ–ಮುಖ್ಯವಲ್ಲದೆ
ಸಣ್ಣ ದೊಡ್ಡದೇನುಂಟು ನುಡಿ ॥ ೩ ॥

ಬಂದುದೇಕೊ ನಿಂದುದೇಕೊ ಇಂದಿಗೇನೊ ಮುಂದಕೇನೊ
ಒಂದೂ ಯೋಚನೆಯ ಮಾಡದೆ–ಮಾನುಷ ಜನುಮ
ದಂದಗೆಡಿಸಿ ವ್ಯರ್ಥಗೊಳಿಪುದೆ ? ॥ ೪ ॥

ನಡೆಯೆ ಮುಖ್ಯ ಮಾನವಗೆ ನಡೆಯೆ ಸೌಖ್ಯವೀವುದವಗೆ
ನಡೆಯೆ ದೊಡ್ಡ ಮಾರ್ಗದೊಳಗೆ–ಜೀವನದಲಿ
ಎಡರು ತೊಡರು ಬಾರದವನಿಗೆ ॥ ೫ ॥

ನಡೆದು ತೋರಿಸಲು ಬೇಕು ಹಿಡಿವ ದಾರಿಯನ್ನು ಜಗದಿ
ನುಡಿದರೇನು ಬಂತು ಫಲವು–ನುಡಿವ ರೀತಿ
ನಡೆದು ತೋರಲಾಗ ಸಫಲವು ॥ ೬ ॥

ಬಿಡದೆ ಹರವ ತೊಟ್ಟು ತನ್ನ ಮಡದಿ ಮಕ್ಕಳನು ಪೊರೆವ
ಸಡಗರದಿ ಸತ್ಯವಂತರ–ಮಾರ್ಗವ ಹಿಡಿದು
ನಡೆವಾತನೆ ಧನ್ಯನಾನರ ॥ ೭ ॥

ಮಾನವನ ಸೌಖ್ಯಕೆಂದೇ ಏನೆಲ್ಲವೀ ಧರಣಿಯಲಿ
ಸಾನುಕೂಲವಾಗಿ ನಿಂತಿರೆ—ದುರ್ಬುದ್ಧಿಯಲಿ
ತಾನೊಬ್ಬನೆ ಸವಿಯಲೆಣಿಪರೆ ? ॥ ೮ ॥

ತನ್ನ ಬಾಳು ಪರರಿಗಾಗಿಯೆನ್ನುವ ಧ್ಯೇಯವ ಮರೆತು
ಅನ್ಯ ಜನರ ಹಿತವ ತಪ್ಪಿಸಿ—ಬಾಳುವುದು ಸರಿ
ಯೆನ್ನುವುದು ತರವೆ ಯೋಚಿಸಿ ! ॥ ೯ ॥

ಯಾವುದಾದರೊಂದು ರೀತಿ ಸೇವೆ ಪರರಿಗಾಗುವಂತೆ
ನೋವು ಸಾವುಗಳಿಗೆ ಲಕ್ಷ್ಯವ—ನೀಯದ ನರ
ಜೀವನ ಸಾಫಲ್ಯ ಪಡೆಯುವ ॥ ೧೦ ॥

ಆಯು ಮುಗಿಯೆ ಸಾಯಬೇಕು ನೋಯಲೇಕೆ ತಿಳಿದು ತಿಳಿದು
ಶ್ರೇಯೋವಂತನಾಗಿ ಬಾಳಲು—ಯೋಚಿಸುವುದು
ಕಾಯವಿದ ಸದುಪಯೋಗಿಸಲು ॥ ೧೧ ॥

## ಇಪ್ಪತ್ತನೆಯ ಸಂಧಿ

### ಯಾರು ಕುಲಜ ?

ಕುಲಗಳ ನಿಂದಿಸಲೇಕೆ ? ಕುಲವೆಂಗು ಹಾರಾಡಲೇಕೆ ?
ಕಲಹವನ್ನು ಮಾಡಲೇತಕೆ–ತನ್ನಯ ಕುಲ
ಹಳಿದು ಶೋಗಪಡುವುದೇತಕೆ ? ॥ ೧ ॥

ಜಲಜನಾಭನನ್ನು ನೆನೆವ ಕುಲಜನೇ ಸತ್ಕುಲಜನಯ್ಯ
ತಿಳಿದು ಭಜಿಸಲಾವ ರೂಪದಿ–ನೆನೆದರೂ ಧನ್ಯ
ಸುಲಭ ಮಾರ್ಗವಿದುವೆ ಲೋಕದಿ ॥ ೨ ॥

ಹುಟ್ಟಿಸಿಹನು ಸೃಷ್ಟಿಗೊಡೆಯನಿಷ್ಟು ಜಗದ ಜೀವಿಗಳನು
ಶ್ರೇಷ್ಠ ಬದುಕ ಬಾಳಿ ಸುಖಿಸಲು–ಇದನರಿಯದಲೆ
ಕೆಟ್ಟ ಮನುಜ ಮೆರೆವ ಮದದೊಳು ! ॥ ೩ ॥

ಯಾವ ಕುಲವಾದರೇನು ? ಯಾವ ಜಾತಿಯಾದರೇನು ?
ದೇವ ಜಗದೊಳೊಬ್ಬನಲ್ಲದೆ–ಹಲವರಿಹರೆ
ಭಾವ ಭಕ್ತಿಯಿರಲು ಸಾಲದೆ ? ॥ ೪ ॥

ಆವದೇವನಾದರೇನು ಕಾವದೇವನೊಬ್ಬ ಜಗಕೆ
ತೀವಿದ ಭಕ್ತಿಯೊಳಾತನ–ಭಜಿಸಲು ಸಾಕು
ಜೀವನ ಸಾರ್ಥಕವವನ ॥ ೫ ॥

ನಿನ್ನ ನಿನ್ನ ನಿಯತಕರ್ಮ ನನ್ನಿಯಿಂದಲಾಚರಿಸು
ನಿನ್ನ ಬಾಳಿನನುಭವಂಗಳ–ವರದಿಯನೊಪ್ಪಿ
ನಿನ್ನು ಮರೆಯದವನ ಪದಗಳ ॥ ೬ ॥

ಜಾತಿಮತದ ಮಾತನೆತ್ತಿ ಮಾತು ಮನಬಂದಂತಾಡಿ
ನೀತಿ ನ್ಯಾಯ ಬಿಟ್ಟು ಜನರು–ಪರರನು ಕೆಡಿಸಿ
ಕೋತಿಯಂತೆ ಹಾರುತಿಹರು ॥ ೭ ॥

ಬದುಕಲೊಬ್ಬ ಕರುಬುವರು ಬದುಕುಗೆಡಲು ಹರುಷಿಪರು
ಮೃದುವಾಕ್ಯದಿ ನಂಬಿಸುವರು–ತಿಳಿಯದ ಜನರ
ಹದಗೊಳಿಸಿ ಮೋಸಗೈವರು || ೮ ||

ಸಾಮವಿಲ್ಲ ದಾನವಿಲ್ಲ ಭೀಮ ಭೇದ ಗಂಡೋಪಾಯ
ಕಾಮನೆಗಳ ಸಾಧಿಪುದಕೆ–ಪ್ರಯೋಗ ಮಾರ್ಗ
ನೇಮ ಮೀರಿ ಬದುಕುವುದಕೆ || ೯ ||

ಇಂದು ತಿಂದು ಸುಖಿಸಿದುಡೆ ಬಂದ ಲಾಭ ಮುಂದಕೇನು ?
ಬಂದ ಭಾಗ್ಯವೆಂಬ ಗರ್ವದೆ–ಮೆರೆದಾಡುವರು
ಹಿಂದು ಮುಂದನೊಂದು ನೋಡದೆ || ೧೦ ||

## ಇಪ್ಪತ್ತೊಂದನೆಯ ಸಂಧಿ

### ಎಂತಹ ಕೆಟ್ಟ ಕಾಲವಿದು ?

ಧರಣಿಯು ನಿಸ್ಸಾರವೆನಿಸಿ ಬೆಳೆವ ದವಸ ಧಾನ್ಯಕ್ಕೆಲ್ಲ
ನರರಿಗಿಂತ ಮಿಗಿಲು ರೋಗವು–ಆವರಿಸಿ ಅವಕೆ
ಪರಿಪರಿ ಔಷಧಿ ಪ್ರಯೋಗವು || ೧ ||

ಎಲ್ಲೆಲ್ಲೂ ಕೀಟಗಳ ಕಾಟ ಎಲ್ಲೆಲ್ಲು ರಸಗೊಬ್ಬರದೂಟ
ಇಲ್ಲವೆನಲು ಬೆಳೆಯೆ ನಾಶವು–ಸೇವಿಸುವಾಹಾರ
ದಲ್ಲಿಲ್ಲವು ಪೌಷ್ಟಿಕಾಂಶವು || ೨ ||

ನಾಗರೀಕ ಜನರ ತೆರದಿ ಸೋಗುಹಾಕಿ ಮಕ್ಕಳಾದಿ
ಯಾಗಿ ಯುವಕ ಯುವತಿಯರ–ಅಪಹರಿಸುವಂಥ
ರೋಗವಂಟಿಸಿಹುದು ಪೌರರ || ೩ ||

ದುಷ್ಟ ಸಂಘ ಬೆಳೆದು ಬಲಿತು ಕಷ್ಟವೇ ಹೆಚ್ಚಿತು ಪ್ರಜೆಗ
ಳಿಷ್ಟ ನಷ್ಟ ಕೇಳುವರಾರು ?–ರಕ್ಷೆಯಿಲ್ಲದೆ ಕಂ
ಗೆಟ್ಟು ಜನರು ಗೋಳಿಡುವರು || ೪ ||

ಜೀವನಕೆ ನೀತಿ ನಿಯಮ ಜೀವಿಸಲುಪಾಯ ಕರ್ಮ
ಜೀವನದ ಮೌಲ್ಯವೆಲ್ಲವು–ಈ ಪರಿ ಜ್ಞಾನ
ಜೀವಿಹರಿಗೆ ಬೇಕಾಗಿಲ್ಲವು || ೫ ||

ಬದುಕಿಗಾವ ಬೆಲೆಯೂ ಇಲ್ಲ ಬದುಕಿಗೇಕೆ ವಿಧಿ ನಿಷೇಧ
ಬದುಕಿದರಾಯಿತು ಹೇಗೆಯೊ !–ಎನ್ನುವ ದರ್ಪ
ಬೆದಕಲೇನು ಲಾಭ ತಿಳಿಯೊ || ೬ ||

ಪ್ರಾಯ ತಲೆದೋರೆ ಕಲ್ಲು ಹಾಯುವವರೇ ಬಹಳವಾಯ್ತು
ಆಯುವ ಲೆಕ್ಕಿಸದೆ ಬೇಗದಿ–ಜೀವಗಳ ತೆರುವ
ಜಾಯಮಾನ ದುಃಖದಾ ವರದಿ || ೭ ||

ಎಲ್ಲಿ ನೋಡಲಾತ್ಮಹತ್ಯೆ ಎಲ್ಲಿ ನೋಡಲಪಘಾತಗಳು
ಎಲ್ಲಿ ನೋಡಿ ರೋಗರುಜಿನವು–ದಾರಿದ್ರ್ಯವಿವು
ಚೆಲ್ಲಾಟವಾಡುತಲಿಹವು ! ॥ ೮ ॥

ವೈದ್ಯರಿಂದ ಗುಣಕಂಡಿಲ್ಲ ವಾದಗಳಿಗೆ ನ್ಯಾಯವಿಲ್ಲ
ವಾಧ್ಯರಿಂದ ವಿದ್ಯೆಯಿಲ್ಲವು–ಉಪ್ಪೊತ್ತಿನ ನೈ
ವೇದ್ಯಕಲ್ಲ ಬರುವಾದಾಯವು ॥ ೯ ॥

ತಿನ್ನುವನ್ನ ಹಿಟ್ಟು ರೊಟ್ಟಿ ಕುಡಿವ ನೀರು ಹೊದೆವ ಬಟ್ಟೆ
ತನ್ನ ಸುತರ ಸತಿಯು ರಕ್ಷೆಗೆ–ಬೇಕಾದ ಮನೆಯು
ಇನ್ನಿಲ್ಲವಾಗಿದ ಮನುಜಗೆ ॥ ೧೦ ॥

ಉಪವಾಸ ವನವಾಸ ಮಾಡಿ ಹೆಂಡಿರು ಮಕ್ಕಳ ಸಾಕಿ
ಉಪಜೀವಿಸಲಾರದಂತಿದೆ–ಇಂದಿನ ನಮ್ಮ
ಉಪರಾಷ್ಟ್ರದ ಸ್ಥಿತಿಯು ಹೀಗಿದೆ ! ॥ ೧೧ ॥

ಹೊಟ್ಟೆ, ಬಟ್ಟೆ, ಕಟ್ಟೆ, ತಾನು ಕಟ್ಟಿಕೊಂಡ ಸತಿಯೂ ಸೇರಿ
ಹೊಟ್ಟೆಪಾಡಿಗೆ ದುಡಿಯುತಿದ್ದರೂ–ಸಾಲದು ನಿತ್ಯ
ಕಟ್ಟಲೆಗೆ ಸಾಲದೆನುವರು ॥ ೧೨ ॥

ಅವರ ಮಕ್ಕಳೋದುಬರಹವವರ ರೋಗದಾರೈಕೆಯು
ಯುವಕ ಯುವತಿಯರ ಮದುವೆಯು–ಏನೆಂತೋ ಹೇಗೋ
ಶಿವನೇ ಬಲ್ಲನಿದು ಸಮಸ್ಯೆಯು ! ॥ ೧೩ ॥

ಹೆತ್ತು ಹೊತ್ತು ಸಾಕಿದವರ ಪುತ್ರರೇ ನೂಕುತಲಿಹರು
ಮತ್ತರಾಗಿ ಮೇಲೆ ಬೀಳ್ವರು–ನಿಜ ಸತಿಯರ
ಚಿತ್ತದಂತೆ ಕುಣಿಯುತಿರುವರು ॥ ೧೪ ॥

ಮಕ್ಕಳ ಹಡೆದಿಹ ತಾಯಿಯಕ್ಕರೆಗೆ ಬೆಲೆಯುಂಟೆ
ಚಿಕ್ಕವರ ದೊಡ್ಡವರ ಮಾಡಿದ–ತಂದೆಯ ಋಣ
ಮಕ್ಕಳು ತೀರಿಸರೀದಿನ ! ॥ ೧೫ ॥

ಓದುಬರಹ ಉಡಿಗೆತೊಡಿಗೆ ವೇಷಭೂಷಣವೆ ವಿಚಿತ್ರ
ಆದರವೌದಾರ್ಯವಿನಯ–ವರ್ತನೆಗಳು
ಹೋದುವೆಲ್ಲೊ ಕೇಳೊ ಮಹರಾಯ ॥ ೧೬ ॥

ಸ್ವರ್ಗ ಸೌಖ್ಯಪಡುವ ಸ್ವಪ್ನ ಲೋಕದಲ್ಲಿ ವಿಹರಿಸುತ
ನರ್ಗ ತಾರತಮ್ಯವಿಲ್ಲದೆ–ಪರದೆಯ ಚಿತ್ರ
ಸ್ವರ್ಗವೆಂದೇ ಭ್ರಮಿಸುವಂತಿದೆ ! ॥ ೧೭ ॥

ಮೂರು ಹೊತ್ತು ಕಾಮಗೀತೆ ಪ್ರೇಮಗೀತೆಯಂತೆ ಆದು !
ಯಾರ ಬಾಯಿಯಲ್ಲೂ ಗಾಯನ–ದೇವನ ಸ್ಮರಣೆ
ದೂರವಿಂದಿಂತಿದೆ ಜನಮನ ॥ ೧೮ ॥

ಯಾವ ತಾರತಮ್ಯವಿಲ್ಲ ಯಾವ ವಯೋ ಭೇದವಿಲ್ಲ
ಯಾವನೋ ಯಾವಳ ಕಾಮಿಸಿ–ಹಾಡುವ ಗೀತೆ
ನಾವು ಕೇಳುತಿಹೆವು ಭ್ರಮಿಸಿ ! ॥ ೧೯ ॥

## ಇಪ್ಪತ್ತೆರಡನೆಯ ಸಂಧಿ

### ಹಾಡಿನ ಜಾಡು

ಹಾಡು ಮಾತ್ರ ಕಿವಿಗಿಂಪು ಗಂಧರ್ವಲೋಕದ ಕಂಪು
ಹಾಡಿನೊಳಗೆ ತಿರುಳೇನಿಲ್ಲವು !–ಕಲಿಯುವ ನೀತಿ
ಜಾಡೆಲ್ಲಿದೆ ಹೇಳುವಿರಾ ನೀವು ? || ೧ ||

ಹಲವು ಹತ್ತು ಹಾಡಿನೊಳಗೆ ಸುಳಿವುದೊಂದೊಳ್ಳೆಯ ಹಾಡು
ಉಳಿದುದೆಲ್ಲ ಕಾಮರತಿಯರ–ಪ್ರತಾಪ ತಾಪ
ಬಿಳಿಯ ಪರದೆ ನಟ ನಟಿಯರ || ೨ ||

ಸುಳ್ಳು ಕಳ್ಳತನವು ಮೋಸ ಕ್ಷುಲ್ಲಕ ನಡೆ ನುಡಿ ತೋರ್ಪ
ಅಲ್ಲ ಸಲ್ಲದ ಕಟ್ಟುಕತೆಗಳು–ಗೀತೆಗಳು ಜನರ
ತಲ್ಲಣಗೊಳಿಸಿಹವೀಗಳು || ೩ ||

ಎಳೆಯರಿಂದ ಮೊದಲು ಮಾಡಿ ಬೆಳಗಿನಿಂದ ರಾತ್ರಿವರೆಗೆ
ನಲಿವರೆಲ್ಲರೀಗೀತೆಗಳ–ಕೇಳುತ ಮೆಚ್ಚಿ
ಕಳೆಯುತಿಹರು ದಿನ ದಿನಗಳ || ೪ ||

ಯಾವ ಹಾಡೊ ಯಾರ ಹಾಡೊ ಯಾವ ಜಾಡೋ ಯಾವ ಕೋಡೋ
ಜೀವನಕೆ ಸಾಫಲ್ಯತೆಯ–ತಂದೀಯುವುದೆ ?
ಜೀವನದಿ ಸುಖವ ಶಾಂತಿಯ || ೫ ||

ತಿನ್ನಲಿಲ್ಲ ಹೊಟ್ಟೆ ತುಂಬ ಹೊದೆಯಲಿಲ್ಲ ಮೈಯ ತುಂಬ
ವಿನ್ನಾದರೂ ಬುದ್ಧಿ ಬರಲಿಲ್ಲ–ಜುಟ್ಟಿಗೆ ಹೂವು !
ಮುನ್ನ ಮುಡಿಯದೆ ಬಿಡುವನೇ ಅಲ್ಲ ! || ೬ ||

ಅನಸೂಯೆ ಸೀತೆ ಸಾವಿತ್ರಿ ದಮಯಂತಿ ದ್ರೌಪದಿಯರಾದಿ
ಘನ ಪತಿವ್ರತೆಯರಾದರ್ಶವು–ಬೇಡವಾಯಿತ್ತಿಂದು
ಮನಬಂದಂತಿರ್ಪುದೆ ಪಥ್ಯವು || ೭ ||

ಸದ್ವಿದ್ಯೆ ಸದ್ಬುದ್ಧಿಯು ಮೇಣ್ ಸದ್ವಿವೇಕ ಸದಾಚಾರ
ಸದ್ವ್ಯಾಪಾರ ಸದ್ಗೃಹಸ್ಥಿಕೆ–ಯಾರಿಗೆ ಬೇಕು ?
ಯದ್ವಾತದ್ವಾವಾಯ್ತು ಕಲಿಕೆ ॥ ೮ ॥

ಋಣದ ಬಾಧೆ ಪಾಪ ಭೀತಿಯರಿವು ಯಾರಿಗುಂಟೋ ಅವರು
ಗುಣಿಗಳೆನಿಸಿ ಸತ್ಯ ಮಾರ್ಗದಿ–ಬಾಳುವರು ಸುಖದಿ
ಹಣಕೆ ಮೋಹಿಸದೆ ನ್ಯಾಯದಿ ॥ ೯ ॥

ಚಿತ್ರಗೀತೆ ಕೇಳುತಿರ ಹೊತ್ತುಗೊತ್ತಿಗಾಯಾಕೆಲಸ
ತುತ್ತು ಅನ್ನ ಬಟ್ಟೆ ಮಾರ್ಗವು–ನಡೆಯುವುದುಂಟೆ ?
ಚಿತ್ತವಿಸಿ ಟೀಕೆಯಲ್ಲಿವು ! ॥ ೧೦ ॥

## ಇಪ್ಪತ್ಮೂರನೆಯ ಸಂಧಿ

### ಮುಪ್ಪಿನಲ್ಲಿ ಚಿಂತೆ

ಮುದುಕನಾದಮೇಲೆ ಹೆಚ್ಚು ಬದುಕಿರಲುಬಾರದಯ್ಯ
ಉದರ ಭರಣಕಾಗಿ ಪರರ–ಹಂಗಿನೊಳಿರೆ
ಮುದವಾಗದು ಕೇಳೆಲೊ ನರ ॥ ೧ ॥

ಸಾಕಿದೆಲ್ಲಾ ಮಕ್ಕಳು ಬಿಸಾಕಿ ಬಿಡುವರೊ ನಿನ್ನ
ಸೋಕು ಬೇಡವೆನಿಪುದವರಿಗೆ–ಅವರ ಚಿಂತೆ
ಬೇಕಾದಷ್ಟಿರುವವೊ ಬಗೆ ಬಗೆ ॥ ೨ ॥

ಏಕೆ ಹುಟ್ಟಿಸಿದೆ ನಮ್ಮ ನಾಕಲಾರದೆನ್ನುವರು !
ನೂಕುವರು ನಿನ್ನ ಮೂಲೆಗೆ–ನಿನ್ನಯ ಕ್ಷೇಮ
ಬೇಕೇತಕಯ್ಯ ಅವರಿಗೆ ? ॥ ೩ ॥

ಮಕ್ಕಳ ಮೇಲಿನ ಚಿಂತೆ ಹೆತ್ತವರಿಗುಂಟು ನಿಜವು
ಮಕ್ಕಳು ದೊಡ್ಡವರಾಗಲು–ಆ ಮೋಹ ಬಿಡಲು
ತಕ್ಕುದವರಿಗಾಲೋಚಿಸಲು ॥ ೪ ॥

ಇದ್ದರೇನು ಬಿಟ್ಟರೇನು ನಿನ್ನ ಪಾಡು ನಿನ್ನದಯ್ಯ
ಇದ್ದ ನಿಜವ ಹೇಳುತಿರುವೆ–ಕಲಿಗಾಲವಯ್ಯ !
ತಿದ್ದಲವರ ನಿನಗೆ ಸಾಧ್ಯವೆ ? ॥ ೫ ॥

ನಿನ್ನ ನೀನೇ ತಿದ್ದಿಕೊಳ್ಳೊ ನಿನ್ನುದ್ಧಾರ ನಿನ್ನ ಕೈಲಿ !
ನಿನ್ನ ಕೈ ನಡೆಯುದ ಕಾಲಕೆ–ಮರೆಯದೆ ನೆನೆಯೊ
ನಿನ್ನ ಗುರುವ ಕಾಲ ಕಾಲಕೆ ॥ ೬ ॥

ಯಾರನು ನಿಂದಿಸಬೇಡ ಯಾರನು ಯಾಚಿಸಬೇಡ
ಯಾರ್ಯಾರ ಚಿಂತೆಯೂ ಬೇಡಯ್ಯ–ನಿನ್ನಯ ಮನದಿ
ಧೀರನಾಗೆ ಸುಖಿಯು ನೀನಯ್ಯ ॥ ೭ ॥

ಅವರವರ ದೃಷ್ಟಾದೃಷ್ಟ ಕರ್ಮಫಲವನುಸರಿಸಿ
ಅವರವರಾಫಲವನುಣುವರು–ತಪ್ಪಿಸಲಿದ
ಕವರೇನನೂ ಮಾಡಲಾರರು ॥ ೮ ॥

ಕಾಲ ದೇಶ ವಯೋಧರ್ಮ ಶೀಲ ಸಂಗ ಸಂಬಂಧದಿ
ಬಾಲ್ಯ ಯೌವನ ವಾರ್ಧಿಕ್ಯದಲಿ–ಗುಡಿಯುತ ಭವದ
ಜಾಲದಲಿ ಹೆಣಗುವರಿಲ್ಲಿ ॥ ೯ ॥

ಬಂದವ ನೀನೊಬ್ಬ ಮತ್ತೆ ಹೋಗುವ ನೀನೊಬ್ಬನಯ್ಯ
ಬಂಧು ಬಳಗವೆಲ್ಲ ಮಧ್ಯದಿ–ನಿನ್ನಾದಿಯಂತ್ಯ
ಕೆಂಡೂ ಬಾರರಿವರು ಜಗದಿ ॥ ೧೦ ॥

ಕಟ್ಟಿಟ್ಟ ಬುತ್ತಿಯು ಕೇಳೊ ಹುಟ್ಟು ಸಾವು ಜೀವಿಗಳಿಗೆ
ಕಷ್ಟ ಸುಖ ಮಿಶ್ರದನುಭವ–ತಪ್ಪದು ಜಗದ
ಸೃಷ್ಟಿ ನಿಯಮವಿದುವೆ ಮಾನವ ! ॥ ೧೧ ॥

ಕಂಡೊ ಕಾಣದೆಯೊ ನೀನು ಉಂಡುಟ್ಟುದನೆಲ್ಲವ ಬ್ರ
ಹ್ಮಾಂಡದೊಡೆಯಗರ್ಪಣಗೈದು–ನಿಸ್ಸಂಗಿಯಾಗೆ
ಗಂಡುಗಲಿಯೆನಿಪೆ ನಿಜವಿದು ॥ ೧೨ ॥

ತನ್ನ ಸಮರಿಲ್ಲವೆಂಬ ಹಮ್ಮು ನರಗೆ ಸಹಜ ಗುಣ
ಅನ್ಯರ ಕಡೆಗಣಿಪ ಸ್ವಭಾವ–ಈ ಗರ್ವ ಮುರಿಯೆ
ಚೆನ್ನಾಗಿಯೆ ಬಾಳುವನವ ॥ ೧೩ ॥

ಇದಕೆ ಬೇಕು ಸದ್ಗುರುವು ಹೃದಯ ಪರಿವರ್ತನೆಯ ಮಾಡಿ
ಸದಮಲದ ತತ್ವ ಬೋಧಿಸೆ–ಇಷ್ಟಾದಮೇಲೆ
ಸದಮಲಾತ್ಮನನನಹನ್ನೈಸೆ ॥ ೧೪ ॥

ಗುರುವೇ ತಾಯಿ ಗುರುವೇ ತಂದೆ ಗುರುವೇ ಸಕಲ ಬಂಧು ಬಳಗ
ಗುರುವೇ ಮಿತ್ರ ಗುರುವೇ ರಕ್ಷಕ–ಭವ ಮೋಚಕನು
ಗುರುವೇ ಪರಮ ದೈವ ಸೂಚಕ ॥ ೧೫ ॥

ಗುರುವನಾರಾಧಿಸದ ಜನ ನರಿ ನಾಯಿಗಳಿಗಿಂತ ಕಡೆ
ನರುವ ಜಾತಿ ಮತದ ನರರಿಗೆ–ಗುರುವಿಂದ ಮುಕ್ತಿ
ಗುರುವಿನ ಗುಲಾಮನಹನಿಗೆ ॥ ೧೬ ॥

---

# ಇಪ್ಪತ್ನಾಲ್ಕನೆಯ ಸಂಧಿ

## ಅಪೇಯ ಪಾನ

ಮಾದಕ ಪಾನೀಯವು ನಿಷೇಧವೆಂದು ತಿಳಿದು ತಾವು
ಹಾದಿ ತಪ್ಪಿ ದುಷ್ಟ ಚಟಗಳ–ಹಾವಳಿಗೆ ಸಿಕ್ಕಿ
ಹೋದುದೇ ಪಥವಾಯ್ತೇ ಜನಗಳ ॥ ೧ ॥

ಮಾನಮತ್ತರಾದ ಜನ ಜ್ಞಾನ ತಪ್ಪಿ ಮೆರೆದು ಜರಿದು
ಹೀನ ವಚನಗಳನಾಡುತ–ಸಮಾಜಗಳ
ಸ್ಥಾನಮಾನವನ್ನೇ ಕೆಡಿಸುತ ॥ ೨ ॥

ಕುಡಿದು ಕಳ್ಳತನ ಮಾಡಿ ಕುಡಿದು ಕೆಟ್ಟ ಜನರ ಕೂಡಿ
ಕುಡಿದು ಪರರ ಸತಿಯರ ಕೂಡಿ–ತಮ್ಮ ನಂಬಿದ
ಮಡದಿ ಮಕ್ಕಳ ಮರವುದೇ ರೂಢಿ ॥ ೩ ॥

ಕುಡಿಯಬೇಡ ಮದ್ಯವನ್ನು ಹೊಡೆಯ ಬೇಡ ಸತಿಯ ಸುತರ
ಹಡೆದವರ ಕಡೆಗಾಣಬೇಡ–ಎನ್ನುವ ಬೋಧೆ
ಹುಡಿ ಮಣ್ಣೊಳು ಬೆರೆತವು ನೋಡ ॥ ೪ ॥

ತನ್ನ ಇಚ್ಛೆ ತನ್ನ ಮಾರ್ಗಕನ್ಯರ ಪ್ರವೇಶವೇಕೆ ?
ತನ್ನದೇ ಕಿರೀಟವೆನ್ನುವ–ಪ್ರವೃತ್ತಿ ಬೆಳೆದು
ಮಣ್ಣು ಮುಕ್ಕುತಿಹನು ಮಾನವ ॥ ೫ ॥

ಕಣ್ಣಿದ್ದರೂ ಕಾಣಲಾರ ಕಿವಿಯಿದ್ದೂ ತಾ ಕೇಳಲಾರ
ಹೆಣ್ಣು ಹೊನ್ನು ಮಣ್ಣಿನಾಸೆಗೆ–ಮಾಡದುದ ಮಾಡಿ
ಹುಣ್ಣಾಗಿ ಕೊಳೆಯುವನು ಕಡೆಗೆ ॥ ೬ ॥

ಮಾಡಬಾರದುದನು ಮಾಡೆ ಆಗಬಾರದ್ದಾಗುವುದು
ರೂಢಿಯ ಗಾದೆಯಿದೆಲ್ಲವು–ಮೀರಲು ಜಗವೇ
ಕಾಡಿಸಿವನ ಕೊಲ್ಲುವುದು ದಿಟವು ! ॥ ೭ ॥

ಸುಥೆಯು ಮಾತ ಕೇಳೊ ನಿನ್ನ ಹೃದಯದಂತರ್ಯಾಮಿಯೊಪ್ಪೆ
ಬದುಕ ಸಾಗಿಸಯ್ಯ ಪರರಿಗೆ–ಕೇಡೆಣಿಸದಂತೆ
ಮುದವನೇ ಹಂಚಯ್ಯ ಜನರಿಗೆ || ೮ ||

ಇದರೊಳಾವ ಗುಟ್ಟು ಇಲ್ಲ ಇದರೊಳಾವ ಕಪಟವಿಲ್ಲ
ಇದರೊಳಾವ ಸುಳ್ಳು ಹೇಳಿಲ್ಲ ! ಇದ್ದ ಸತ್ಯಾಂಶ
ಇದರೊಳೆಲ್ಲಾ ರಟ್ಟಾಗಿದೆಯಲ್ಲ ! || ೯ ||

ಹೇಳಿದೀ ಸಂಗತಿಗಳೆಲ್ಲ ಕಾಲಕೆ ತಕ್ಕಂತೆ ಇಹವು
ತಾಳ ಗೆಜ್ಜೆ ಹಾಕಿ ಹಾಡಲು–ಮಾನವರು ತಮ್ಮ
ಬಾಳ ಹಸನು ಮಾಡಿಕೊಳ್ಳಲು || ೧೦ ||

## ಇಪ್ಪತ್ತೈದನೆಯ ಸಂಧಿ

### ಸಹನೆ–ಎಚ್ಚರಿಕೆ

ಸಹನೆಯೊಂದು ದೊಡ್ಡ ಗುಣ–ಫಲ ಪುಷ್ಪ ತರುಗಳಿಗುಂಟು
ಸಹನೆ ಮಾತೆ ಭೂದೇವಿಗುಂಟು–ಬಾಳಿನ ದ್ವಂದ್ವ
ಸಹಿಸಿದವರಿಗಮಿತ ಸುಖವುಂಟು ॥ ೧ ॥

ಸಹನೆಯಿಂದ ಚಿತ್ತಸಮತೆ ಸಹನೆಯಿಂದ ಪ್ರಾಣಿದಯೆ
ಸಹನೆಯಿಂ ಲೋಕೋಪಕೃತಿಯು–ಸರ್ವೇಶ ಪೂಜೆ
ಸಹಿತಬಹುದು ಪರಮ ಸುಕೃತಿಯು ॥ ೨ ॥

ಸಂಸ್ಕಾರ ಸಹವಾಸವು ಮೇಣ್ ಸತ್ಸಂಗ ಸತ್ಸಂಪ್ರದಾಯ
ಸಂಸ್ಕೃತಿ ವರ್ಧನೆಗೆ ಸಾಧನ–ಸದ್ವಂಶಜರ
ಸಂಸ್ಕಾರವೇ ಮೂಲಕಾರಣ ॥ ೩ ॥

ಹಿಂದಿನ ಜನ್ಮಗಳ ಕರ್ಮವಾಸನೆಯು ಬೀಜರೂಪ
ಮುಂದುವರಿಯುತೀಜನ್ಮದಲಿ–ಸಂಸ್ಕಾರವೆನಿಸಿ
ಮುಂದೆ ವರ್ಧಿಸುವುದು ಬಾಳಲಿ ॥ ೪ ॥

ಉದ್ಯೋಗಶೀಲತೆ ಬೇಕು ಉದ್ವೇಗ ಸಲ್ಲದೆಂದೆಂದು
ಉದ್ಯೋಗಿಯೆ ಪುರುಷ ಶ್ರೇಷ್ಠನು–ಸತತ ಬಾಳಿ
ನುದ್ಯಾನದಲಿ ವಿಹರಿಸುವನು ॥ ೫ ॥

ಏನೇ ಕಷ್ಟ ಬಂದರೂ ತಾ ಮೌನವಾಗಿ ಸಹಿಸಿಕೊಂಬ
ಮಾನವನೇ ನಿಜ ಮಹಾತ್ಮನು–ಜನಕೋಟಿಗೆಲ್ಲ
ಜ್ಞಾನವೀವ ಪರಮಾಚಾರ್ಯನು ॥ ೬ ॥

ಮಾಡುವ ಕಾರ್ಯಗಳಿಗೆಲ್ಲ ಮಿತಿಯು ತಾನೊಂದಿರಬೇಕು
ನೋಡುವ ನೋಟಕೂ ಅಂತೆಯೇ–ಹಿತವಿರಬೇಕು
ಆಡುವ ಮಾತಿಗೂ ಅಂತೆಯೇ ॥ ೭ ॥

ಮೇರೆ ತಪ್ಪಿ ಮಾಳ್ಪ ಕೆಲಸ ಯಾರಿಗೂ ಫಲಿಸದು ಕೇಳು
ದಾರಿ ತಪ್ಪಿದಂತೆ ವಾಹನ–ಅಪಘಾತದಿಂದ
ಚೂರು ಚೂರಾದೀತು ತಿಳಿಯಣ್ಣಾ || ೮ ||

ಎಚ್ಚರ ನಿನಗಿಲ್ಲದಿರೆ ಮಚ್ಚರಿಪರೆಲ್ಲ ನಿನ್ನ
ನುಚ್ಚುನೂರು ಮಾಡಿ ಬಿಡುವರು–ನಿನ್ನಯ ಕ್ಷೇಮ
ಹುಚ್ಚರ ಪಾಲಿಗೆ ಬಿಡದಿರು || ೯ ||

ಸಕ್ಕರೆ ತರುತಿದ್ದ ಚೀಲ ಅಕ್ಕಿಗಾಗಿ ಮೀಸಲಿಂದು !
ಮಕ್ಕಳು ಹೆಂಗಸರೆಲ್ಲರು–ಹಣ ಕೊಟ್ಟು ಕಾದು
ಭಿಕ್ಷ ಬೇಡುವಂತೆ ಆದರು ! || ೧೦ ||

ತಿನ್ನುವ ದವಸ ಧಾನ್ಯ ಚಿನ್ನಾಟವಾಡುತ ಮಾಯ
ಗನ್ನಗತಕದಿಂದ ಬೆಲೆಗಳ–ಹೆಚ್ಚಿಸಿ ಸುಲಿಗೆ
ಯನ್ನು ಮಾಡುತಿಹರು ಪ್ರಜೆಗಳ || ೧೧ ||

ಇಂದಿದ್ದವರು ನಾಳೆಯಿಲ್ಲವೆಂದ ಪರಿ ಆಹಾರಕೆ
ಬಂದಿತೆನೆ ಚೋದ್ಯವಲ್ಲವೆ ?–ವ್ಯಾಪಾರ ಮೋಸ
ಕೆಂದಾದರೂ ಕೊನೆಯೆ ಇಲ್ಲವೆ ? || ೧೨ ||

ಮೋಸ ಸಲ್ಲದೆನ್ನುತುಪನ್ಯಾಸಗೈವ ಮಂದಿ ತಾವೇ
ಮೋಸ ಕೃತ್ಯಗಳನು ಕಂಡರೂ–ಕಾಣದಂತಿಹರು
ಘಾಸಿಪಡುವ ಪ್ರಜೆಯ ನೋಡರು || ೧೩ ||

ನಾಳೆ ನಾನು ನೀನು ಯಾರೊ ಗಾಳಿ ಬಂತು ತೂರಿದೆವು
ಹಾಳು ಬಾಳಿನ ಗೋಳು ತೀರದು–ಎನ್ನುವುಪೇಕ್ಷೆ
ಖೂಳ ಬುದ್ಧಿ ನರಗೆ ಬಂದುದು || ೧೪ ||

ಕೇಳಿ ತಾಳಿದವರಿದನು ಬಾಳುವರು ಸುಖದಿ ಮುಂದೆ
ಕಾಳುಮೂಳು ಮಾತಿದಲ್ಲವು–ವಿವೇಕ ವೇಳ್ವ
ಶೀಲವಂತ ವಾಕ್ಯಗಳಿವು || ೧೫ ||

# ಇಪ್ಪತ್ತಾರನೆಯ ಸಂಧಿ

## ಆರೋಗ್ಯವೇ ಭಾಗ್ಯ

ಆರೋಗ್ಯವೆ ಭಾಗ್ಯವಯ್ಯ ಆರೋಗ್ಯವೆ ಆಯುರ್ಮೂಲ
ಆರೋಗ್ಯವೇ ಮುಖ್ಯ ಬದುಕಿಗೆ–ಬಾಳಿಗೆ ಸೌಖ್ಯ
ಸಾರವು ಸಕಲಾಭಿವೃದ್ಧಿಗೆ ॥ ೧ ॥

ರೋಗರುಜಿನ ಕಾಡಿಸುವ ದೇಹವನ್ನು ನಾವು ನಿತ್ಯ
ಜಾಗರೂಕರಾಗಿ ಕಾಯಲು–ಸಾಧಿಸಿ ಧರ್ಮ
ಭೋಗಿಸಲು ಬಹುದಾವಾಗಲು ॥ ೨ ॥

ಧರ್ಮ ಕರ್ಮವೆಸಗೆ ದೇಹ ಧರ್ಮನೆಟ್ಟಗಿರಬೇಕು
ಮರ್ಮವಿದ ತಿಳಿಯದವರು–ದುರ್ಬಲರಾಗಿ
ದುರ್ಮೋಹಿಗಳಾಗಿ ಕೆಡುವರು ॥ ೩ ॥

ಗಟ್ಟಿಯಾದ ವ್ಯೈಯವನು ರಟ್ಟೆ ಮುರಿಯೆ ದುಡಿಯಬಲ್ಲ
ಹಿಟ್ಟು ಸೊಪ್ಪು ರೊಟ್ಟಿ ಮೆದ್ದರೂ–ನಿರೋಗಿಯಾಗಿ
ಕುಟ್ಟಬಲ್ಲ ಕಲ್ಲನಾದರೂ ॥ ೪ ॥

ರೋಗಿಯಾದವನು ಬೇನೆ ರಾಗವ ಪಾಡುತ ನಿತ್ಯ
ಸಾಗಿಸಲಾರದೆ ಬಾಳನು–ನರಳುವ ಗತಿ !
ಹೇಗೆ ಬಣ್ಣಿಸುವುದಿದನು ॥ ೫ ॥

ದೂರದೃಷ್ಟಿಯಿಟ್ಟು ನಮ್ಮ ನಾರುವ ದೇಹವ ರೋಗ
ದೂರವಾಗಿರಿಸಲು ಬೇಕಯ್ಯ–ತಪ್ಪಿದರೆ ಸೌಖ್ಯ
ದೂರನು ನೀನಾಗುವೆ ಅಯ್ಯ ! ॥ ೬ ॥

ದುಡಿದು ಬದುಕ ಸಾಗಿಸುವಗೊಡಲು ತುಂಬಿ ದೇಹ ಶಕ್ತಿ
ಕಡಿಮೆಯಾಗದಂತೆ ಬೆಳೆವುದು–ಬೇಕಾದ ಕೆಲಸ
ಬಿಡದ ಮಾಡೆ ಸಾಧ್ಯವಪ್ಪುದು ॥ ೭ ॥

ಈ ಶರೀರವನ್ನು ನಾವು ಪೋಷಿಸುವ ಭರದಿ ಪರರ
ಶೋಷಿಸದೆ ಪುಣ್ಯ ಕೆಲಸವ--ನಿರ್ವಹಿಸುವುದೆ
ಲೇಸು ಮಾರ್ಗ ಕೇಳೊ ಮಾನವ ! ॥ ೮ ॥

ದೇಹವು ಶಾಶ್ವತವಲ್ಲ ಕಾಲಚಕ್ರ ಸುಳಿಯೊಳಿಹುದು
ಸಾಹಸದಿ ಪುಣ್ಯ ಸಾಧನೆ–ಮಾಡಿದಲ್ಲದೆ
ಆಹೋದೆ ನಿನ್ನಾತ್ಮಸಾಧನೆ ? ॥ ೯ ॥

ದೇಹಶುದ್ಧಿಯಾತ್ಮಶುದ್ಧಿ ಪಡೆವವನೆ ಪುಣ್ಯಶಾಲಿ
ಸ್ನೇಹವನಿಹದಲ್ಲಿ ಸಾಧಿಸಿ–ದೇವತ್ವ ಪಡೆವ
ಬಾಹಿರರ ಸಂಗವರ್ಜಿಸಿ ॥ ೧೦ ॥

ಕಟ್ಟಿಕೊಂಡವರ ಬಾಳ ನೆಟ್ಟಗಿಟ್ಟು ತನ್ನ ಗುರಿಯ
ಮುಟ್ಟಿ ಮುಂದೇರುವನು ಸಗ್ಗವ !–ಉತ್ತಮ ನಡತೆ
ಗುಟ್ಟನರಿದ ಶ್ರೇಷ್ಠ ಮಾನವ ॥ ೧೧ ॥

ದರ್ಪದಿಂದ ನಡೆವರೆಲ್ಲ ಕರ್ಪೂರವುರಿಯುಂಡು ಬಯಲ
ನಪ್ಪುವಂತೆ ಮಾಯವಾಗರೆ ?–ದೀನರ ಸೇವೆ
ಗರ್ಪಣೆಯ ಮನವಿಲ್ಲದಿರೆ ! ॥ ೧೨ ॥

# ಇಪ್ಪತ್ತೇಳನೆಯ ಸಂಧಿ

## ಹೊಗಳಿಕೆ-ಆಶೆ-ಅರ್ಹತೆ

ಸುಗುಣವೊಂದಿಲ್ಲದ ನರರ ಹೊಗಳಬಹುದೆ ? ಹೆದರಿ ಅವರ
ದಗ ಮೋಸವಧಿಕಾರದರ್ಪಕೆ ?–ನಾಯಿಗಳ ಬಳಗ
ಬೊಗಳಿದಂತಲ್ಲವೆ ನಿರರ್ಥಕೆ ! ॥ ೧ ॥

ಬೊಗಳಿ ಮಾತನಾಡಿ ತಾವು ಹೊಗಳಿಸಿಕೊಳ್ಳುತ ಕೊನೆಗೆ
ಉಗುಳುವರು ತಂಬುಲದಂತೆ–ನೆರೆಹೊರೆಯ ಕ್ಷೇಮ
ಬಗೆಯರವರಿಗೆ ತಮ್ಮದೇ ಚಿಂತೆ ॥ ೨ ॥

ಕರಣಗಳು ಶುದ್ಧವಿಲ್ಲ ಕರುಣವೆಂಬುದಿಲ್ಲವಂತಃ
ಕರಣ ಶೂನ್ಯರಮಮಃ ! ಕಠಿಣರು–ಮೇದಿನಿಯೊಳಗೆ
ಮೆರೆಯುತಿಹರೀಪರಿಯ ಜನರು ॥ ೩ ॥

ಎಂದಿಗಿವರ ಕಾಟ ತಪ್ಪಿ ದಂದುಗಪಡುತಿಹ ದೀನ
ಬಂಧುಗಳಿಗೆ ಸುಖವು ಸಿಗುವುದೋ–ಆ ದೇವ ಬಲ್ಲ
ನೆಂದಿಗಿವರ ಹಮ್ಮು ಮುರಿವುದೊ ॥ ೪ ॥

ಕಾಟವೇ ಹೆಚ್ಚಾಗಿ ಭವದ ಕೋಟಲೆ ಸಂಸಾರದಲ್ಲಿ
ಕೀಟ ಮೊದಲು ನರನ ಪರ್ಯಂತ–ಎಲ್ಲಾ ದುರಂತ !
ದಾಟಲು ಸಾಧ್ಯವೆ ಈ ಹಂತ ? ॥ ೫ ॥

ಏನು ಪಡೆಯುವಾಸೆ ನಿನಗೆ ? ಏನು ಕಾಣುವಾಸೆ ನಿನಗೆ ?
ಏನು ಕೆಲಸ ಮಾಡುವಾಸೆಯು ?–ಏನಭಿರುಚಿಯು !
ನೀನು ಸಾಧಿಸುವ ಗುರಿಯು ? ॥ ೬ ॥

ಅರ್ಹತೆಯ ಪಡೆಯಬೇಕು ಯಾವುದನು ಸಾಧಿಸಲು
ಅರ್ಹತೆ ಸನ್ನಡತೆಯಿದ್ದರೆ–ಎಲ್ಲವೂ ಸಾಧ್ಯ
ಅರ್ಹನೆನಿಸೊ ಸುಖಬೇಕಾದರೆ ॥ ೭ ॥

ಯೋಗ್ಯತೆಯು ನಿನ್ನೊಳಿರೆ ಭೋಗ್ಯವಸ್ತು ನಿನ್ನ ವಶವು
ಯೋಗ ಭೋಗ ಸಮನ್ವಯದ–ದೃಷ್ಟಿಯೆ ಬೇಕು
ದ್ವೇಗ ಸಲ್ಲದಿದಕೆ ಸರ್ವದ || ೮ ||

ಕಾರಣ ನೀನಲ್ಲ ಸಕಲ ಕಾರ್ಯಗಳ ಗೈವುದಕೆ
ಕಾರಣ ಬೇರೊಬ್ಬನಿರುವನೋ–ಅವನಿಚ್ಛೆಯಂತೆ
ಕಾರ್ಯಗಳ ಮಾಡಿಸುವನೋ || ೯ ||

ನಾನೇ ನಾನೆಂದೆನ್ನುವಭಿಮಾನವಹಂಭಾವಗಳು
ಜ್ಞಾನಿಯಾದವನಿಗಿಲ್ಲವೊ–ನಿರ್ಲಿಪ್ತನವನ
ಜ್ಞಾನಿಯಂತೆ ಮೆರೆವುದಿಲ್ಲವೊ || ೧೦ ||

ಬಂದ ಕಷ್ಟ ಸುಖವ ಸಹನೆಯಿಂದಲನುಭವಿಸಿ ಮನದ
ಸಂದೇಹ ಭ್ರಮೆ ಭಯಗಳಿಲ್ಲದೆ–ಸಮಚಿತ್ತನಾಗಿ
ನಂದ ಪಡುವ ಯೋಗಿಯಂದದೆ || ೧೧ ||

ಎಲ್ಲರೂ ಸ್ನೇಹಿತರಲ್ಲ ಎಲ್ಲರೂ ಬಂಧುಗಳಲ್ಲ
ಎಲ್ಲರೂ ಹಿತಚಿಂತಕರಲ್ಲ–ಇದರನುಭವ
ವಿಲ್ಲದವನಿಗೆಂದೂ ಸುಖವಿಲ್ಲ ! || ೧೨ ||

ಕೆಟ್ಟ ಚಾಳಿಗಳ ಬಿಟ್ಟು ದುಷ್ಟ ಯೋಚನೆಯ ಬಿಟ್ಟು
ಶ್ರೇಷ್ಠ ಮಾರ್ಗದಲಿ ಕಾಲಿಟ್ಟು–ನಡೆದರೆ ಜನರು
ಎಷ್ಟೋ ಸುಖಿಗಳಹರಿದೇ ಗುಟ್ಟು || ೧೩ ||

## ಇಪ್ಪತ್ತೆಂಟನೆಯ ಸಂಧಿ

### ನಮ್ಮ ನಾಡು

ಕನ್ನಡ ನಾಡಿನ ಸೊಗಸು ಕನ್ನಡ ನಾಡಿನ ಹಿರಿಮೆ
ಕನ್ನಡ ನಾಡಿನ ವೈಭವ–ವರ್ಣಿಸಲಿನ್ನ
ಜನ್ಮ ಸಫಲವೆಂಬೆ ಮಾನವ ॥ ೧ ॥

ತೊದಲು ನುಡಿಯೊಳಿನ್ನ ತಾಯ ಮುದದಿ ಚಿತ್ರಿಸುತ್ತಲಿರುವೆ
ಹೃದಯ ಮುಳುಗಿ ಭಕ್ತಿ ಭಾವದ–ಸಾಗರದಲಿ
ಪದವೊಂದೆರಡರಲಿ ಕನ್ನಡದ ॥ ೨ ॥

ಭಾರತಾಂಬೆ ಕನ್ನಡಾಂಬೆ ತಾಯಿ ಮಗಳ ರೀತಿ ಕೇಳೊ
ಭಾರತಾಂಬೆಯ ಮುತ್ತಿನ ಮೂಗುತಿ–ಈ ಕನ್ನಡಾಂಬೆ
ಭಾರತ ಜನನಿಗತಿಪ್ರೀತಿ ! ॥ ೩ ॥

ರಾಜರಾಜೇಶ್ವರಿಯು ನಮ್ಮ ಚೆಲುವ ಕನ್ನಡಾಂಬೆ ತಿಳಿಯೊ
ರಾಜಶೇಖರನ ರಾಣಿಯು–ಕರುನಾಡಿನೊಡತಿ
ರಾಜಿಸುವ ಪರಮೇಶ್ವರಿಯು ॥ ೪ ॥

ಮಹಿಷಮರ್ದಿನಿಯು ಇವಳೆ ಚಾಮುಂಡೇಶ್ವರಿಯು ನಮ್ಮ
ಮಹಿಶೂರ ನಗರಾಧಿದೇವತೆ–ಭುವನ ವಿಖ್ಯಾತೆ
ಮಹಿಶೂರ ನೃಪರಿಷ್ಟದೇವತೆ ॥ ೫ ॥

ಮಹಿಮೆಯಿವಳ ಕೃಪೆಯ ಬಲದಿ ಮಹಿಯೊಳೀ ಕರುನಾಡ ನೆಲದಿ
ಮಹನೀಯರೆನಿಬರೊಪುಟ್ಟುತ–ಬುಧ ಗುರು ಕವಿಗ
ಳಿಹಪರದ ಸುಖಕೆ ಸಂತತ ॥ ೬ ॥

ದಿವ್ಯ ಬೋಧೆಗೈದು ತಾವು ದಿವ್ಯ ಮಾರ್ಗ ತೋರಿ ತಮ್ಮ
ದಿವ್ಯ ಕೃತಿಗಳನ್ನು ನೀಡುತ–ಜೀವರ ಲೇಸ
ನವ್ಯಾಹತದಿ ಸೇವೆ ಸಲಿಸುತ ॥ ೭ ॥

ಲೋಕೋಪಕಾರವಗೈದು ಕಾಕು ಮನುಜರನ್ನು ತಿದ್ದಿ
ಭೂಕೈಲಾಸವೆನ್ನಿಸಿದರು–ಕನ್ನಡ ಜಾಣ
ರೇಕೋ ಭಾವದಿಂದ ಮೆರೆದರು || ೮ ||

ಒಬ್ಬಿಬ್ಬರೆ ಹೆಸರಿಸಲು ? ತಬ್ಬಿಬ್ಬಾಗುವುದು ಕೇಳೊ
ಅಬ್ಬಬ್ಬ ! ಆ ಮಹಾತ್ಮರಿಗೆ–ತಲೆಬಾಗಿ ಸ್ಮರಿಸೆ
ಮಬ್ಬು ಮತಿಯು ಮಾಯ ಮನುಜಗೆ ! || ೯ ||

ಒಂದೊಂದು ಕಾಲದಿ ಜನಿಸುತೊಂದೊಂದು ರೂಪದಿ ಕಾಣು
ತೊಂದೊಂದು ವಿಧದಲಿ ನಾಡಿಗೆ–ಬೀದಿಗೆ ಜಗಕೆ
ಸಂದೇಶವಿತ್ತರು ಜನರಿಗೆ || ೧೦ ||

ಮನುಜನಾದ ಮೇಲೆ ಅವನ ಜನುಮ ಸಾಫಲ್ಯವನು ಪಡೆಯೆ
ದಿನಚರಿಯಿಂತಿರಬೇಕೆನ್ನುತ–ಬೋಧಿಸಿದರು
ಮನ ಹತೋಟಿಯಿರಬೇಕೆನ್ನುತ || ೧೧ ||

ಲಂಗುಲಗಾಮಿಲ್ಲದಿಹ ದಂಗೆಯೇಳ್ವ ಕುದುರೆಯಂತೆ
ಮಂಗ ಮನವು, ಕಟ್ಟಿರೆಂದರು–ಮಾನವರ ತಿದ್ದಿ
ಡಂಗುರ ಸಾರುತ ನಡೆದರು || ೧೨ ||

ಮಾನವನ ಸುಖದ ಬಾಳಿಗೇನು ಬೇಕವೆಲ್ಲವನು
ಸಾನುರಾಗದಲಿ ಬೋಧಿಸಿ–ನಡೆದು ತೋರಿಸಿ
ಮಾನನಿಧಿಗಳೈದಿದರು ಹರಸಿ || ೧೩ ||

ಏಸು ಬೋಧಿಸಿದರು ಮನುಜರಾಸೆಗೊಂದು ಮಿತಿಯೇ ಇಲ್ಲ
ಈಶ ಪೂಜೆ ದೇಶ ಸೇವೆಯು–ಎಂಬುದ ಮರೆತು
ನಾಶವೈದುತಿಹುದು ಜನತೆಯು || ೧೪ ||

# ಇಪ್ಪತ್ತೊಂಭತ್ತನೆಯ ಸಂಧಿ

## ಅತಿಥಿ-ಅಭ್ಯಾಗತರ ಸೇವೆ

ಅತಿಥಿ ಅಭ್ಯಾಗತರ ಸೇವೆ ಮತಿವಂತರ ಕರ್ಮ ದೇವ
ಸ್ತುತಿಯಾರಾಧನೆಗಳೆಲ್ಲವು—ಬೀದಿಯ ಪಾಲು
ಗತಿಗೆಟ್ಟಿಹ ಬಾಳಿಂದೆಲ್ಲವು ॥ ೧ ॥

ಅರಿಯದನನರಿದೆನೆಂಬ ಪರಿಯಿಂದು ವಿಚಿತ್ರ ನೋಡು
ಅರಿತವರ ತೆರದಿ ನಟಿಸುತ—ತಪ್ಪುವರೆಡವಿ
ಕುರಿಗಳಂತೆ ಹಳ್ಳಕೆಳಿಯುತ ! ॥ ೨ ॥

ಗಾಳಿ ನೀರು ಬೆಂಕಿ ಮಣ್ಣು ಈ ಆಕಾಶ ಚಂದ್ರ ಸೂರ್ಯ
ರಾಳುತಿಹರು ಪ್ರಭುಗಳೆನಿಸಿ—ನಮ್ಮೆಲ್ಲರನ್ನು
ಮೇಲು ಕೀಳೆಂದೆನದೆ ಪೋಷಿಸಿ ! ॥ ೩ ॥

ಇವರ ಕಣ್ಣು ತಪ್ಪಿಸಲು ಇವರಿಲ್ಲದೆ ಬದುಕಲು ಮಾ
ನವಗೆ ಸಕಲ ಜೀವರಾಶಿಗೆ—ಆಗದು ಕೇಳು
ಇವರೆ ಕಾಂಬ ದೇವರೆಮಗೆ ॥ ೪ ॥

ನಾಕ್ಷಿಯಿವರು ನಮ್ಮ ತಪ್ಪನೀಕ್ಷಿಪರು ಪ್ರತಿಕ್ಷಣವು
ಕುಕ್ಷಿ ತುಂಬಲಾವು ಮಾಡುವ—ಕಾಯಕಕೆ ತಾವ್ ಪ
ರೋಕ್ಷ ನೆರವೀವರೊ ಮಾನವ ! ॥ ೫ ॥

ತಪ್ಪ ಮಾಳ್ಪವರಿಗಿವರು ತಪ್ಪದೆ ಶಿಕ್ಷೆಗಳನೀವ
ರೊಪ್ಪೆ ಕ್ಷಮಿಸುವರು ನಮ್ಮನು—ಮರೆಯೊಗಲು ಕೇಳು
ಒಪ್ಪವಾಗಿ ನಡೆಸೆ ಬಾಳನು ॥ ೬ ॥

ಉಪ್ಪಿಟ್ಟವರ ನಾವು ನಮ್ಮ ಮುಪ್ಪಿನೆಲ್ಲು ನೆನೆಯ ಬೇಕು
ಅಪ್ಪ ಅಮ್ಮನ ಮರೆಯದಿರಬೇಕು—ರಕ್ಷಿಸಬೇಕು
ತಪ್ಪದ ನಡೆನುಡಿಯಿರಬೇಕು ॥ ೭ ॥

ಕಷ್ಟಕಾರ್ಪಣ್ಯಗಳ ಸಹಿಸಿ ಇಷ್ಟ ದೇವರ ನೆನೆಯಬೇಕು
ಶಿಷ್ಟರ ಸಂಗದೊಳಿರಬೇಕು—ದುರ್ಬೋಧೆಗೈವ
ದುಷ್ಟರ ದೂರದಲ್ಲಿಡಬೇಕು ॥ ೮ ॥

ಹೆಂಡತಿ ಮಕ್ಕಳ ಕ್ಷೇಮ ಕಂಡುಕೊಳ್ಳುತಿರಬೇಕು
ಬಂಡುಣಿಯಂದದಿ ಗುರುಗಳ—ಪದ ಕಮಲಗಳ
ಬಂಡುಂಡು ಕಳೆವುದು ದಿನಗಳ ॥ ೯ ॥

ಸಾಗರ ದಾಟುವ ನರನೇಗಲಾರ ಭವದ ಕಡಲೊ
ಳಾಗಸ ಪಥದಿ ತೂರುವ—ಜಾಣ ತನ್ನುಸಿರು
ಹೋಗುವುದ ತಪ್ಪಿಸನವ ॥ ೧೦ ॥

ನಿದ್ದೆ ಹೋದ ಮಾನವ ಮತ್ತೆದ್ದೇಳುವುದನರಿಯನವ
ನೆದ್ದರೆರಡಾಳಲ್ಲೆನುವವ—ಕಡೆಗೊಂದು ದಿನ
ಬಿದ್ದು ಸಾವುದರಿಯದಂಥವ ! ॥ ೧೧ ॥

ಗದ್ದಲವ ಮಾಡುತ ಗೇಣುದ್ದದೊಡಲ ಹೊರೆಯೆ ಹಣವ
ಕದ್ದು ಪರರ ಹಿಂಸೆ ಪಡಿಸುವ—ಕಷ್ಟದ ಸುಳಿಗೆ
ಬಿದ್ದು ಪ್ರಾಣವನ್ನು ತೆರುವವ ॥ ೧೨ ॥

ಇದ್ದ ನಾಲ್ಕು ದಿನಗಳಲ್ಲಿ ಸದ್ದಿಲ್ಲದೆ ಬಾಳ್ವೆ ನಡೆಸಿ
ಮುದ್ದಾಗಿ ಲೋಕಕೆ ಸತ್ಯದಿ—ನಡೆವಾತನಿಗೆ
ಹೊದ್ದುವುದೆ ದುಃಖ ದಿಟದಿ ? ॥ ೧೩ ॥

# ಮೂವತ್ತನೆಯ ಸಂಧಿ

## ಯಾರನ್ನು ಆಳಬಲ್ಲೆ ; ಗೆಲಬಲ್ಲೆ ?

ನೂರಾರು ದೇವರು ನಮಗೆ ಯಾರಿಲ್ಲವೆಂದನಬೇಡ
ಯಾರಾದರೊಬ್ಬನ ನಂಬಿಲೊ–ಸೌಖ್ಯದಿ ಬಾಳೊ
ದಾರಿ ನಿನಗೆ ಸುಗಮ ಕಾಣೆಲೊ ! ॥ ೧ ॥

ಹೇಳುವ ಕೇಳುವರಿಲ್ಲದಾಳುವೆನು ಜನರನೆಂಬ
ಕೀಳು ಬುದ್ಧಿ ತರವಿನಲ್ಲವೊ–ಪ್ರಜೆಗಳ ಮುಂದೆ
ಆಳು ನೀನು ! ಸುಳ್ಳಿದಲ್ಲವೊ ! ॥ ೨ ॥

ಯಾರನಾಳಬಲ್ಲೆ ನೀನು ನಿನ್ನನೇ ನೀನಾಳದವ !
ಯಾರ ತಡೆಯ ಬಲ್ಲೆಯೊ ನೀನು ?–ತರಗೆಲೆಯ ಪರಿ
ತೂರಿ ಗಾಳಿಗೆ ಹಾರುವಾತನು ! ॥ ೩ ॥

ಯಾರಿಗೆ ನಿನ್ನಯ ಕಟ್ಟು, ಯಾರಲಿ ನಿನ್ನಯ ಪಟ್ಟು
ಯಾರಿಗೆ ನಿನ್ನಯ ಒಳಗುಟ್ಟು ?–ಎಲ್ಲವೂ ರಟ್ಟು !
ಯಾರನೂ ಕೊಲದಿರು ಬಚ್ಚಿಟ್ಟು ! ॥ ೪ ॥

ಒಳಿತನೇ ಯೋಚಿಸು ಸದಾ ಒಳಿತನೇ ಮಾಳ್ಪುದು ನೀನು
ಒಳಿತು ಜನರ ಸಂಗ ಸೇರುತ–ಒಳಿತನೇ ಕೇಳಿ
ಒಳಿತನೇ ನೋಳ್ಪುದು ಸಂತತ ॥ ೫ ॥

ಕೇಡ ಬಯಸುವುದು ಸಲ್ಲ ಕಾಡುವುದು ಪರರ ಸಲ್ಲ
ಕೇಡಿಗರ ಸಂಗವು ಸಲ್ಲ–ತಪ್ಪಾಗಿ ನಡೆಯೆ
ಕೇಡು ನಿನಗೇ ಸಂಶಯ ಸಲ್ಲ ॥ ೬ ॥

ದೇಹದಿ ಕಾಮವು ಕ್ರೋಧ ಲೋಭ ಮೋಹ ಮದ ಮತ್ಸರವು
ಸಾಹಸದಿ ನಿನ್ನ ಸೋಲಿಸಿ–ಗೆಲ್ಲುತಲಿಹವು
ಮೋಹಪಾಶದಿಂದ ಬಂಧಿಸಿ ॥ ೭ ॥

ಸಲುಗೆ ಬಿಡಲು ಸುಲಭದಿ ನೀ ಬಲೆಗೆ ಬೀಳ್ವೆ ಜೋಕೆಯಿಂದ
ಬಲಪಡಿಸು ನಿನ್ನ ಮನವನು—ವಿವೇಕದಿಂದ
ಗೆಲಲುಬಹುದೀ ವೈರಿಗಳನು || ೮ ||

ಕೆಟ್ಟವರ ಹಿಡಿತದಿಂದ ದೂರವಿರಲು ಕೋಪ ಗರ್ವ
ಹೊಟ್ಟೆಯು ಮತ್ಸರ ತೋರಿನು—ಉಳಿದಿರ್ಪ ಮೂರ
ಶಿಷ್ಟರ ಸೇರಲು ಬಳಸು || ೯ ||

ಆರು ವೈರಿಗಳನು ಜಯಿಸಲಾರಾರಿಗೂ ಶಕ್ಯವಿಲ್ಲ
ಧೀರ ತಾನು ದೇಶ ಕಾಲಪ—ಪಾತ್ರವರಿತು
ಆರು ಶತ್ರುಗಳನು ಗೆಲ್ಲುವ ! || ೧೦ ||

ಉಪ್ಪು ಕಾರ ತಿನ್ನುವೊಡಲು ತಪ್ಪು ಮಾಡಬಹುದು ಆದ
ನೊಪ್ಪಿಯಂತರ್ಯಾಮಿಗಿದನು—ನಿವೇದಿಸಲು
ತಪ್ಪದೆ ಕ್ಷಮಿಸುವ ನಿನ್ನನು || ೧೧ ||

ಹೆಂಡತಿ ಮಕ್ಕಳ ಋಣವನುಂಡು ತೀರಿಸಲು ಬೇಕು
ಭಂಡು ಮಾಡದವರ ಸಲಹುತ—ತಾನುಣ್ಣಬೇಕು
ಕಂಡು ಪ್ರೇಮದಲಿ ಸಂತತ || ೧೨ ||

ನಿನ್ನ ಧರ್ಮ ಮಾರ್ಗದಲ್ಲಿ ಅನ್ಯರಿಂದಲೊದಗಿ ಬರ್ಪ
ಭಿನ್ನ ಕರ್ಮ ಧರ್ಮ ಘಟನೆಗೆ—ನೀ ಕಾರಣನೆ ?
ಇನ್ನೇತಕೆ ಚಿಂತೆ ನಿನಗೆ ? || ೧೩ ||

# ಮೂವತ್ತೊಂದನೆಯ ಸಂಧಿ

## ನಟನೆ

ಆಟ ಕಟ್ಟುವವರೆ ಹೆಚ್ಚು ಗೂಟ ನಾವು ಬೂದಿ ಬಳಿದು
ಊಟದ ಮಾರ್ಗಕೆ ನಟಿಸುವ–ಪರಿಯೆಲ್ಲವಿಂದು
ನೋಟ ಮಾತ್ರಕಾಕರ್ಷಿಸುವ ॥ ೧ ॥

ನಟನೆಯ ಪ್ರಪಂಚವಿದು ನಟರು ನಾವೆಲ್ಲರು ಪಾತ್ರ
ನಟಿಸುವಲ್ಲಿ ಸಹಜವಾಗಿಯೆ–ವರ್ತಿಸಬೇಕು
ಕಟುವ ಸಿಹಿಯನೊಂದು ಮಾಡಿಯೆ ॥ ೨ ॥

ಜಾರಲಿಲ್ಲಿ ಜಾಗವಿಲ್ಲ ಜೋರಿಗವಕಾಶವಿಲ್ಲ
ದಾರಿತಪ್ಪಲಾರಿಗಾಗದೊ–ವಿವೇಕದಿಂದ
ಪಾರುಗಾಣಬೇಕಾಗಿಹುದೊ ॥ ೩ ॥

ಚಿತ್ರದ ಗೊಂಬೆಗಳ ನೋಡಿ ಚಿತ್ರದ ಹಾಡುಗಳ ಹಾಡಿ
ಸತ್ಯ ಜಗದಿ ವಿಹರಿಸೆ ಸಲ್ಲ–ಬದುಕಿನಲಿ ನೈಜ
ಪಾತ್ರವಹಿಸಿದಾತ ಗೆಲಬಲ್ಲ ! ॥ ೪ ॥

ಯಾವ ಪಾತ್ರವಾದರೇನು ಮೇಲು, ಕೀಳು ಗಣಿಸೆ ಸಲ್ಲ
ನಾವು ನಮ್ಮ ನಮ್ಮ ಪಾತ್ರಕೆ–ತಕ್ಕಂತೆ ನಟಿಸಿ
ಸಾವನೊಪ್ಪಿ ಪೋಪುದು ಪರಕೆ ॥ ೫ ॥

ಇದರೊಳಾವ ಕಷ್ಟವಿಲ್ಲವಿದರೊಳಾವ ನಷ್ಟವಿಲ್ಲ
ಉದರಭರಣಕಾಗಿ ನ್ಯಾಯದಿ–ಜೀವನ ನಡೆಸ
ಲದುವೆ ಮಾನ್ಯವಹುದು ಲೋಕದಿ ॥ ೬ ॥

ಇಲ್ಲಿ ಗೈದ ಪುಣ್ಯ ಪಾಪಕಿಲ್ಲಿ ಫಲವನುಂಬ ತೆರದೊ
ಳಲ್ಲಿಯೂ ಮನ್ನಣೆ ಧಿಕ್ಕಾರ !–ಎಗುರಿಸಬೇಕು
ಎಲ್ಲಿ ಮರೆಸಿಕೊಳ್ವೆಯೋ ನರ ॥ ೭ ॥

ಯಾವ ಜನುಮವಾಗಲೇನು ಸಾವು ಹುಟ್ಟುಗಳ ಮಾಲೆ
ಯಾವ ಜೀವನಿಗೂ ತಪ್ಪದು–ಕರ್ಮದ ಪಾಶ
ಯಾವುದೊ ರೂಪದಿ ಬಿಗಿವುದು || ೮ ||

ಒಂದಕೊಂದು ಕರ್ಮ ಬೆಳೆದು ಹೊಂದಿಕೆಗೊಂಡು ನಮ್ಮ ಕಟ್ಟಿ
ಬಂಧಿಪುದು ಸರಪಣಿಯಂತೆ–ಬಿಡಿಸದ ಭವ
ಬಂಧ ಯಮಪಾಶವಿದ್ದಂತೆ ! || ೯ ||

ಹೇಳಿ ಕೇಳಿ ಬಾಳಿನಲಿ ತಾಳಿ ಹರುಷ ಸಹನೆಗಳ
ತೋಳು ತಲೆಯ ಬಲವನೊಳಿತಹ–ಕಾರ್ಯಕೆ ಬಳಸು
ಬಾಳು ಪರಮಾತ್ಮನಿಗೆ ಪ್ರಿಯವಹ || ೧೦ ||

ದೈವದೊಲುಮೆ ಪಡೆದ ಜೀವಿಗಾವದುಃಖವಿಲ್ಲ ಪರರ
ನೋವ ತಾನು ಕೊಂಡು ಸುಖವನು–ಅವರಿಗೆ ಮುದದೊ
ಳೀವ ಸತ್ವಶಾಲಿ ಧನ್ಯನು || ೧೧ ||

ಆಟದ ಮಕ್ಕಳು ಮೊದಲು ಪೇಟಾಧರಿಸೊ ಜನರತನಕ
ಪೇಟೆ ವ್ಯವಹಾರ ಮಾಡುವ–ಸಮಸ್ತ ಜನರು
ಪಾರ ಕಲಿಯಬೇಕೊ ಮಾನವ || ೧೨ ||

ತಿದ್ದಿಕೊಂಡು ನಡೆಯುವುದು ಬುದ್ಧಿವಂತ ಲಕ್ಷಣವು
ಎದ್ದು ಬಿದ್ದು ನಡೆಯ ಕಲಿತಂತೆ–ನಮ್ಮಯ ಬಾಳಿ
ನುದ್ದಕೂ ತಪ್ಪದು ಈ ಚಿಂತೆ ! || ೧೩ ||

ಅಲ್ಲೊ ಇಲ್ಲೊ ಎಲ್ಲೊ ಒಂದು ಸಲ್ಲದ ಮಾತಿರಬಹುದು
ಸುಳ್ಳಂತೂ ಇಲ್ಲವು ಇದರೊಳು–ಪೇಳಿರುವೆ ಸೊಲ್ಲ
ನೆಲ್ಲವೂ ಇದ್ದಂತೆ ನಮ್ಮೊಳು || ೧೪ ||

ನಾಚಿಕೆಯಿಲ್ಲದೆ ಮನಕೆ ತೋಚಿದುದನೆಲ್ಲ ನಾನು
ಗೀಚಿಹೆನೆನ್ನುತ ಜರಿಯದೆ–ಈ "ಕಲಿಪದ"ವ
ವಾಚಕರೋದುವುದು ಮುದದೆ || ೧೫ ||

# ಮೂವತ್ತೆರಡನೆಯ ಸಂಧಿ

## ಕಾಲದ ಸದುಪಯೋಗ

ಎಲ್ಲರೆಲ್ಲವರಿಯರಿದನು ಬಲ್ಲ ಜನರೆ ಹೇಳುತಿಹರು
ಗೆಲ್ಲಲೀ ಜೀವನದಿ ಜಾಣರು–ತಿಳಿದನಿತರೊಳು
ಒಳ್ಳಿದರೆನಿಸಿ ಮೆರೆವರು || ೧ ||

ಕಳೆದ ಕಾಲ ಕಳೆದಾಯುಷ್ಯಗಳಿಗೆ ವ್ಯರ್ಥ ಚಿಂತಿಸದೆ
ತಿಳಿದು ತನ್ನ ತನ್ನ ಶಕ್ತಿಯ–ಬೆಳಸಿ ಬಾಳ
ಬೆಳಕಿಗನ ಬಳಸಬೇಕಯ್ಯ || ೨ ||

ದಿನಚರಿಯ ನುಡಿಯದಲೆ ಬರೆಯುವ ಅಭ್ಯಾಸ ಮಾಡು
ಮನವಚನ ಕಾಯದೊಳಗೆ–ಶುದ್ಧನಾಗಿರು
ಜನ ಹಿತೈಷಿಯೆನಿಸಿ ಧರಣಿಗೆ || ೩ ||

ಒಂದೊಂದು ಗಳಿಗೆ ನಮಗೆ ಮುಂದೆಂದೂ ಬಾರದು ನೋಡು
ಹಿಂದು ಹಿಂದಕೋಡುತಿಹುದು !–ಅದರೊಡನೆ ನಾವು
ಹೊಂದಿ ಬಾಳ ತೇರನೆಳೆವುದು || ೪ ||

ಗಡಿಬಿಡಿಯ ಹೆಚ್ಚು ಕಾಣೊ ಒಡಲ ವಿವಿಧ ಕಾಟಗಳನು
ತಡೆಯಲಾರದೆಲ್ಲಾ ಜನರು–ಶ್ರಮಿಸುವಾಗ
ಎಡವಿ ಬೀಳ್ವ ಹಲವರಿರ್ಪರು || ೫ ||

ಅಡಿಯಿಡುವ ಕಾರ್ಯದಲ್ಲಿ ನುಡಿದಂತೆ ನಡೆಯುವ ಜನರು
ಬಡಬಗ್ಗರ ಕ್ಷೇಮ ಚಿಂತನೆಯ–ಮಾಡುವ ನಾಡಿ
ನೊಡೆಯರಿಲ್ಲದಿಲ್ಲ ಕಂಡೆಯ ! || ೬ ||

ಹುಚ್ಚು ಹರಟೆ ಕಾಲಹರಣ ಮೆಚ್ಚರೆಂದೂ ಬಲ್ಲಿದರು
ಎಚ್ಚರವಹಿಸಿ ನಮ್ಮಯ–ಕಾಲಾವಕಾಶ
ಉಚ್ಚ ರೀತಿ ಬಳಸು ಕಂಡೆಯ ! || ೭ ||

ಕಾಲ ವಸ್ತು ವಿಷಯ ವ್ಯಕ್ತಿಯೆಲ್ಲರ ಸದುಪಯೋಗ
ಶೀಲವಂತರನುಸರಿಸುವ–ಮಾರ್ಗಗಳಿವು
ಕೇಳಿ ತಿಳಿದು ಬಾಳೊ ಮಾನವ ॥ ೮ ॥

ಶ್ರದ್ಧೆಯೊಂದ ಮನುಜನ ಬಾಳುವ್ವಕೂ ಸಂರಕ್ಷಿಪುದು
ಶ್ರದ್ಧೆಗಾಸಕ್ತಿಯೆ ಮೂಲವು–ವಿಶ್ವಾಸ ಭಕ್ತಿ
ಶ್ರದ್ಧೆಯೊಡಗೂಡೆ ಜಯವು ॥ ೯ ॥

ನಿಮಿಷ ನಿಮಿಷವೆಲ್ಲೂ ಮಾಳ್ಪ ಸಮಯೋಚಿತ ಕಾರ್ಯದಲಿ
ಅಮಿತ ಪ್ರೀತಿಯಿರಲು ಸಿದ್ಧಿಯು–ದೊರೆಕೊಂಬುದಿದು
ಭ್ರಮೆಯಲ್ಲವೆಂದಿಹುದು "ಗೀತೆಯು" ॥ ೧೦ ॥

ಅವರ ಭಾವಕವರಕಾರ್ಯಕವರಮಾತಿಗವರನಡೆಗೆ
ಅವರವರ ಸಂಸ್ಕಾರ ವೃದ್ಧಿಗೆ–ತಕ್ಕಂತೆ ಫಲ
ವವರವರ ಪುರೋಭಿವೃದ್ಧಿಗೆ ॥ ೧೧ ॥

# ಮೂವತ್ಮೂರನೆಯ ಸಂಧಿ

## (೧) ಎಲ್ಲರೊಂದೇ ಹೇಗೆ ?

ಒಬ್ಬೊಬ್ಬರಿಗೊಂದು ಕಲಸವಬ್ಬರದ ಮಾತಿದಲ್ಲ
ಒಬ್ಬೊಬ್ಬರಭಿರುಚಿ ಭಿನ್ನವು–ಈ ನಿಯಮದಂತೆ
ಒಬ್ಬೊಬ್ಬರ ಬಾಳ್ ವಿಚಿತ್ರವು ! ॥ ೧ ॥

ನಾನೆ ಬೇರೆ ನೀನೇ ಬೇರೆ ಅವನೇ ಬೇರೆ ಅವಳೇ ಬೇರೆ
ನಾನು ನೀನವನವಳೆಲ್ಲಾ ಒಂದೇ–ಎನ್ನುವ ವಾದ
ಕೇನಾಧಾರ ? ಹೇಳೊ ನಮಗಿಂದೆ ॥ ೨ ॥

ಅಣ್ಣ ತಮ್ಮ ಅಕ್ಕ ತಂಗಿ ತಾಯಿ ತಂದೆ ವೈದ ಮಾವ
ಸಣ್ಣ ದೊಡ್ಡವರು ಮುಂತಾಗಿ–ಎಲ್ಲಾರೊಂದೆನುವ
ಬಣ್ಣಗೇಡಿನ ನುಡಿಗೆ ಕೈಮುಗಿ ? ॥ ೩ ॥

ಬಂಧು ಬಳಗ ಮಿತ್ರವರ್ಗ ಹೊಂದಿಕೊಂಡ ಪರಿವಾರ
ಮಂದಿ ಬೇರೆ ಬೇರೆ ಕಸಬಿನ–ಸಂಸ್ಕಾರಿಗಳು
ಒಂದೇ ಎನ್ನಬಹುದೇ ಮಂಕಣ್ಣಾ ॥ ೪ ॥

ಭಿನ್ನ ಕರ್ಮ ಭಿನ್ನ ರುಚಿ ಭಿನ್ನ ಮತ ಭಿನ್ನ ಭಾವ
ಭಿನ್ನ ದೇಶ ಭಿನ್ನ ಭಾಷೆಯ–ವಯೋ ಭೇದ ಸಂ
ಪನ್ನರೆಲ್ಲರೊಂದೆ ಎಂಬೆಯ ? ॥ ೫ ॥

ನಾನೇನು ಹೇಳುವುದಿಲ್ಲ ನೀನೇ ನಿನ್ನ ತಿಳಿದುಕೊಳ್ಳೊ
ಜ್ಞಾನಿಗಳಿದನೊಪ್ಪುವರೇನೊ ? ವಿಚಾರ ಮತಿ
ಹೀನವಾದವಾಯ್ತಲ್ಲವೇನೊ ॥ ೬ ॥

## (೨) ಸಾಲ

ಸಾಲವೆಂಬುದೊಂದು ಕಲೆಶೂಲೆಯೆಲ್ಲಾ ಮನುಜರಿಗು
ಹೇಳಿ ಕಟ್ಟಿಟ್ಟಿರುವ ಬುತ್ತಿಯು–ಅದನುಣ್ಣದೆಯೆ
ಬಾಳಿದಾತನಿಲ್ಲವೆಲ್ಲಿಯು ॥ ೭ ॥

ಹಣದ ಸಾಲವೊಂದೆನಬೇಡ ಋಣದ ಬಾಧೆ ವಿವಿಧ ರೀತಿ
ಎಣಿಕೆ ಸಿಗದು ಬಾಳ್ವದಿನಗಲಿ–ತೀರಿಸದೆ ನಿಂತ
ಋಣಕೆ ಹೊಣೆ ನೀ ಭವಭವಗಲಿ ॥ ೮ ॥

ದೊಡ್ಡವರ ಚಿಕ್ಕವರ ಹೆತ್ತವರ ಹೊತ್ತವರ
ದೊಡ್ಡವನ್ನ ಮಾಡಿದವರ–ಸತಿ ಪುತ್ರ ಸಖರ
ಬಡ್ಡಿ ಸಾಲ ಕೊಡುವ ಜನರ ॥ ೯ ॥

ಓದುಬರಹ ಕಲಿಸಿದವರ ಹಾದಿ ಸುಗಮ ತೋರಿದವರ
ಬೈದು ಹೊಡೆದು ಕೇಡುಗೈದರ–ಹಿತಶತ್ರುಗಳ
ಭೇದ ಮಾಡಿ ಮೋಸಗೈದರ ॥ ೧೦ ॥

ಹುಟ್ಟಿದೂರು ಕೇರಿ ನಾಡು ಕಟ್ಟಿಕೊಂಡುದ್ಯೋಗ ನಿತ್ಯ
ಕಟ್ಟಳೆ ವ್ಯವಹಾರದೊಳಗಿನ–ಸಾಲದ ಭಾರ
ವಿಟ್ಟಾಡಿಸುವುದು ಮನುಜನ ॥ ೧೧ ॥

ಕಂಡುಕಾಣದಿಪ್ಪ ಋಣವನುಂಡು ತೀರಿಸದೆ ಬಿಡದು
ಭಂಡ ಮೊಂಡರಿಗೆ ಜಗ್ಗದೊ–ಇದನರಿತು ನೀನು
ಗಂಡೆದೆಯಿಂದೆದುರಿಸುವುದೊ ॥ ೧೨ ॥

ವೇಳೆ ವೇಳೆಗಾದ ಋಣವ ಕೈಲಾದಷ್ಟು ತೀರಿಸುತ್ತ
ಕಾಲವಮುಗಿವ ಮೊದಲೇ ಸಾಲದ–ಹೊರೆಯಿಳಿಸಯ್ಯ
ಶೀಲವಂತನೆನಿಸಿ ಸರ್ವದ ॥ ೧೩ ॥

ಅಷ್ಟೊ ಇಷ್ಟೊ ಎಷ್ಟೊ ಸಾಲ ಕಷ್ಟಪಟ್ಟು ತೀರಿಸಯ್ಯ
ಕೆಟ್ಟ ಹೆಸರು ಮಾತ್ರ ಪಡೆಯದೆ–ಎಲ್ಲರ ಹಿತದ
ದೃಷ್ಟಿಯಿಟ್ಟು ನೀನು ಮರೆಯದೆ! ॥ ೧೪ ॥

ಶಾಂತಿ ತೃಪ್ತಿ ಕರುಣೆಯಿಂದ ಹಂತ ಹಂತವಾಗಿ ಬಾಳಿ
ನಂತರಂಗವರಿತು ನಡೆವಗೆ–ಸಾಲದ ಬಾಧೆ
ಹಿಂತೆಗೆವುದಾಮಹಾತ್ಮಗೆ ॥ ೧೫ ॥

ದೇವ ಋಷಿ ಪಿತೃ ಋಣ ಭಾವಿಸಲೀ ಮೂರೇ ಮುಖ್ಯ
ಭಾವ ಶುದ್ಧಿ ಪಡೆದ ಮನುಜನು–ತೀರಿಸಬಲ್ಲ
ಸೇವಿಸಿ ಮೆಚ್ಚಿಸುತವರನು ॥ ೧೬ ॥

ಅವರು ಮೆಚ್ಚಿದುದಕೆ ಗುರುತು ಅವರೇ ಕೊಡುವ ಸತ್ಫಲಗಳು
ಅವರೊಲಿದೀವ ಭೋಗ ಭಾಗ್ಯವೊ! ಇಷ್ಟಾಗೆ ನಿನ್ನ
ಭವದ ಬವಣೆಯೆಲ್ಲ ಮಾಯವೊ! ॥ ೧೭ ॥

# ಮೂವತ್ನಾಲ್ಕನೆಯ ಸಂಧಿ

## ಬಾಳಿಸ ವರದಿ ದೇವರಲ್ಲಿ

ಬಂದ ನಾನು ಭುವಿಗೆ ದೇವ ಹಿಂದಿನ ಕರ್ಮವು ಸವೆಯೆ
ತಂದೆ ನಿನ್ನ ಆಜ್ಞೆ ತಪ್ಪದೆ–ಮಾನವನಾಗಿ
ನಿಂದು ಜಗವನೆಲ್ಲ ನೋಡಿದೆ ! ॥ ೧ ॥

ತಾಯಿ ತಂದೆಯಾದಿಯಾಗಿ ಕಾಯಿದರು ಹಿರಿಯರೆನ್ನ
ಬಾಯಿ ಸಾಲದವರ ಸ್ಮರಿಸಲು–ಅಕ್ಕರೆಯಿಂದ
ನೋಯಿಸದೆ ಪಾಲಿಸಿರಲು ॥ ೨ ॥

ಹೊತ್ತುಗೊತ್ತಿಗನ್ನ ಪಾನವಿತ್ತು ಸಲಹಿ ಬೆಳಸಿದರು
ಕುತ್ತರೋಗ ಹೋಗಲಾಡಿಸಿ–ಉಪಚಾರಗೈದು
ಹತ್ತೆಂಟು ವಿಧದಿ ರಕ್ಷಿಸಿ ॥ ೩ ॥

ಬುದ್ಧಿ ಕಲಿಸಿದರಯ್ಯ ವಿದ್ಯೆ ಹೇಳಿಸಿದರಯ್ಯ
ಉದ್ಧಾರಕೆ ಮಾರ್ಗ ತೋರ್ದರು–ಹಲವಾರು ಪರಿ
ಶ್ರದ್ಧೆ ವಹಿಸಿ ದಯೆಯ ತೋರ್ದರು ॥ ೪ ॥

ಹಿರಿಯರೆನಿತೊ ಮುಂದಿಯೆನ್ನ ಹರಸಿ ಮುದ್ದಿಸಿದರಯ್ಯ
ಹರಿಯ ಕೃಪೆಯು ದೊರಕಲೆಂದರು–ಗುರುವಿನ ಪರಮ
ಕರುಣ ಲಭಿಸಿ ಸುಖಿಸುಯೆಂದರು ॥ ೫ ॥

ಅಕ್ಷರವ ಕಲಿತು ನಾನು ಕುಕ್ಷಿ ವಿದ್ಯೆಗಳಿಸಿದನು
ಲಕ್ಷ್ಯವೆಲ್ಲ ಸ್ವಾರ್ಥಕಾಯಿತು–ಯೌವನ ಮದ
ವಕ್ಷಿಯೊಳಗೆದ್ದು ಕಂಡಿತು ॥ ೬ ॥

ಕಂಡ ಕಂಡ ಕಡೆಗೆ ಮನವ ಚೆಂಡಿನಂತೆ ತಿರುಗಿಸುತ
ಪುಂಡು ವಿಷಯಕೆಡೆಯಕೊಟ್ಟಿತು–ದುರ್ಬುದ್ಧಿಯೆನ್ನ
ಭಂಡನೆನಿಸಿ ಬಯಲಿಗಿಟ್ಟಿತು ! ॥ ೭ ॥

ಕಲಿತ ವಿದ್ಯಗಿಲ್ಲ ವಿನಯ ಬೆಳೆಯಿತಯ್ಯ ಗರ್ವಗಿರಿ
ತಿಳಿಗೇಡಿ ಬುದ್ಧಿಯು ಹುಟ್ಟಿತು—ಅಧಿಕಾರ ಹಂತ
ಬೆಳೆದು ನನ್ನ ಪದವಿ ಹೆಚ್ಚಿತು || ೮ ||

ಎಡಕೆ ಬಲಕೆ ಹಿಂದೆ ಮುಂದೆ ಅಡಿಯಾಳುಗಳ ಮಧ್ಯೆ ನಾನು
ಬಿಡುವಿಲ್ಲದ ಕೆಲಸ ಕಾರ್ಯದಿ—ವಿಜೃಂಭಿಸಿದೆ
ಒಡೆತನವು ಬಂದ ಕಾಲದಿ || ೯ ||

ಕೇಳುವರು ಬೇಡುವರು ಕೀಳು ಜನರೆಂದೇ ಬಗೆದಾ
ಕೇಳಿಕೆಯ ಬೇಡಿಕೆಗಳ ತಿರಸ್ಕರಿಸಿ
ಗೋಳುಪಡಿಸಿದೆನು ಜನಗಳ || ೧೦ ||

ಬಂದವರನಾದರಿಸಲಿಲ್ಲ ಹಿಂದೆ ಮುಂದೆ ನೋಡಲಿಲ್ಲ
ಮಂದಿಯ ಕಷ್ಟವನೊಂದನು—ಕೇಳದೆ ಮನ
ಬಂದ ತೆರದೊಳವರ ಜರಿದೆನು || ೧೧ ||

ಮಾಡಲಿಲ್ಲ ಉಪಕಾರ ನೋಡಲಿಲ್ಲ ಪರರ ಕಷ್ಟ
ವಾಡಲಿಲ್ಲ ವಿನಯ ವಾಕ್ಯವ—ಸರ್ವಜ್ಞನೆಂದು
ತೋಡಿಕೊಂಡೆ ಸಕಲ ಗರ್ವವ || ೧೨ ||

ಅಧಿಕಾರದಪ್ಪಣೆಯಿಂದ ಹೆದರಿ ಜನರು ಹಿಮ್ಮೆಟ್ಟುವ
ಹದನು ಮಾಡಿ ನನ್ನ ಶಕ್ತಿಯ—ತೋರಿದೆನೆನ್ನ
ಬದುಕಿಗಾಗಿ ಬಳಸಿ ಯುಕ್ತಿಯ || ೧೩ ||

ಆಡಿಕೊಂಡರೆನಿತೊ ಜನರು ಕೇಡು ಬಗೆದೆನೆಂದುಯೆನ್ನ
ಮಾಡದೆ ಉಪಕಾರವೆನ್ನುತ—ಅಧಿಕಾರದಲ್ಲಿ
ರೂಢಿಸಿದನು ಸ್ವಾರ್ಥವೆನ್ನುತ || ೧೪ ||

ಹಿರಿಯರ ಹೀಗಳೆದೆನೆಂದು ಕಿರಿಯರ ಹಂಗಿಸಿದೆನೆಂದು
ಗುರುಗಳ ನಿಂದಿಸಿದೆನೆನ್ನುತ—ಪರಸತಿ ಧನಕೆ
ಮರುಳನಾಗಿ ಕೆಟ್ಟೆನೆನ್ನುತ || ೧೫ ||

ತಿನ್ನದ ಕುಡಿಯದ ವಸ್ತುವನ್ನು ಸೇವಿಸಿದೆನೆಂದು
ಅನ್ನಬಾರದ ಮಾತು ಕತೆಗಳ–ಆಡಿದೆನೆಂದು
ನನ್ನಿ ತೊರೆದು ಬಾಳ್ದ ಪರಿಗಳ ॥ ೧೬ ॥

ಇಂತಿವೆಲ್ಲ ದುರ್ಗುಣಗಳು ಅಂತರಂಗದಲ್ಲಿ ತಾವು
ನಿಂತು ನೆಲೆಯ ಮಾಡಿಕೊಂಡವು–ಸ್ವಾಮಿಯೆ ! ನನ್ನ
ಅಂತರಂಗ ಶುದ್ಧವಿಲ್ಲವು ॥ ೧೭ ॥

ಬಾಳಿ ಬದುಕಿ ಜೀವಿಸುವ ಬಾಳು ಸುಗಮವೆನ್ನಿಸುವ
ಬಾಳನು ಬಾಳದೆ ಬಳಲಿದೆ–ವಿಧವಿಧದಲಿ
ಬಾಳಲಿ ನೊಂದೆನು ಬರಿದೆ ॥ ೧೮ ॥

ಸುಖವು ತೋರಲಿಲ್ಲ ವಿಷಯ ಸುಖವೆಲ್ಲವು ದುಃಖವಾಯ್ತು
ಸುಖದ ಬೇರು ದುಃಖ ತರುವಾಯ್ತು–ನಾ ಸವಿದ ಬಾಳೆ
ಸುಖವು ಪರರ ದುಃಖಗೊಳಿಸಿತು ॥ ೧೯ ॥

ಜರಿದರೆನ್ನ ಬಂಧುವರ್ಗ ತೊರೆದರೆನ್ನ ಸತಿ ಪುತ್ರರು
ಮರೆಯಲಿ ನಿಂದಿಸುತೆನ್ನನು–ಪಾಪಿಷ್ಠನೆಂಬ
ಬಿರುದಿನಿಂದ ಕರೆದರೆನ್ನನು ॥ ೨೦ ॥

ಪಾಪಿಯಿವನು ಬಡಬಗ್ಗರ ತಾಪವಪಡಿಸುತ ಘೋರ
ಶಾಪಕೊಳಗಾದನೆನ್ನುತ–ಮುಂದಕೆ ನರಕ
ಕೂಪದಲಿ ಬೀಳ್ವನೆನ್ನುತ ॥ ೨೧ ॥

ಕೊಟ್ಟ ಭಾಷೆ ಸಲಿಸಲಿಲ್ಲ ಹುಟ್ಟಿಸಿ ನಂಬಿಕೆಯನು
ಕಟ್ಟಕಡೆಗೆ ನಂಬಿದವರ–ಕೈಬಿಟ್ಟ ಧೂರ್ತ
ದುಷ್ಟನೆಂಬ ‘ಕೂಗು’ ಅವರ ! ॥ ೨೨ ॥

ಸಮಯ ಬಂದ ಕಾಲದಲ್ಲಿ ಶ್ರಮವನರಿತು ಕೈಲಾದಷ್ಟು
ಶ್ರಮಿಸಿ ದೀನ ಸೇವೆಗೈಯದೆ–ಪರರ ದುಃಖೋಪ
ಶಮನವಮಾಡಿ ಪುಣ್ಯ ಪಡೆಯದೆ ॥ ೨೩ ॥

ಹಿರಿಯ ಗುಣಗಳಿಲ್ಲದಾಗ್ಯೂ ಹಿರಿಯನೆಂದೆನ್ನಿಸಿಕೊಂಡು
ಹಿರಿಯ ಕಾರ್ಯಗೈಯದಿರ್ದರು–ವರ್ಣಿಸಿಕೊಂಡು
ಹಿರಿಯನಾದನಿವನೆಂಬರು ? ॥ ೨೪ ॥

ಅಲ್ಲದ ಸಲ್ಲದ ಪಾಪ ಇಲ್ಲದ ಪ್ರಶಸ್ತಿಗಳ
ನೆಲ್ಲವನು ತಾನೇ ಬಯಸಿ–ಪಡೆವ ಕಡೆ
ಗಿಲ್ಲವಾಯ್ತೆಂದರು ಶಪಿಸಿ ॥ ೨೫ ॥

ಆಚಾರ ವಿಚಾರದಲ್ಲಿ ನೀಚ ಬುದ್ಧಿ ಬಿಡಲಿಲ್ಲ
ಯೋಚನೆ ಸತ್ಫಲವ ಕೂಡಲಿಲ್ಲ–ಗುರು ಹಿರಿಯರು
ಸೂಚಿಸಿದ ಪರಿ ಕೇಳಲೆ ಇಲ್ಲ ! ॥ ೨೬ ॥

ನಿನ್ನ ಮೇಲೆ ಎನಗೆ ಭಕ್ತಿಯಿನ್ನು ಇರಲಿ ಇಲ್ಲದಿರಲಿ
ಎನ್ನ ಮಾತ್ರ ಕೈ ಬಿಡದಿರೊ !–ಈ ಬಿನ್ನಪವ
ಮನ್ನಿಸೆನ್ನ ರಕ್ಷಿಸ ಬಾರೊ ॥ ೨೭ ॥

ಸಾರಸಾಕ್ಷ ಕಮಲಾರಮಣ ನೀರಜನಾಭನೆ ನಿನ್ನ
ಪಾರ ಕರುಣವೆನ್ನ ಮೇಲಿರಲೊ- ಶ್ರೀ ರಘುವರ
ಸಾರಿ ಸಾರಿ ನಮಿಪೆ ಕೃಪಾಳೊ ॥ ೨೮ ॥

## ಮೂವತ್ತ್ರೈದನೆಯ ಸಂಧಿ

### ಹಳ್ಳಿಯ ಜೀವನ

ಹಳ್ಳಿಯ ಜೀವನದೊಳು ಕೊಳ್ಳೆಹೊಡೆವ ಜನರು ಹೆಚ್ಚಿ
ಸುಳ್ಳು ವ್ಯಾಜ್ಯ ಕಳ್ಳತನಗಳು–ತಲೆಯೆತ್ತಿಹವು !
ಬಲ್ಲ ಜನರು ಕಡಿಮೆ ಈಗಲು || ೧ ||

ಗುಂಪು ಕಟ್ಟಿ ಜಗಳ ಹಚ್ಚಿ ತಂಪು ಮಾಡಿಕೊಳ್ವರಿಹರು
ಸಂಪತ್ತನು ಸೂರೆಹೊಡೆಯುತ–ವ್ಯಾಜ್ಯದ ಸೊಂಕು
ಕಂಪರಿಯದ ಜನರ ಕೆಡಿಸುತ || ೨ ||

ಅರಿಯದಜ್ಞಾನಿಗಳೆಂದು ಕರೆವುದು ಹಳ್ಳಿಗರ ತಪ್ಪು
ಅರಿಯರವರು ಕಪಟ ಮೋಸವ–ಪಟ್ಟಣಿಗರಾಡಂ
ಬರದ ಬೂಟಾಟಿಕೆಯ ವೇಷವ || ೩ ||

ಓದು ಬರಹ ಬಾರದಾಗ್ಯೂ ಓದಿನ ಗುರಿಯಲಿ ಬದುಕಿ
ಮೇದಿನಿಯ ನಾಲ್ಕು ಮಂದಿಗೆ–ಉಪಕಾರ ಮಾಡಿ
ಸಾಧಿಸುವ ತಿಳಿವುಂಟವರಿಗೆ || ೪ ||

ನೀತಿ ನೇಮ ಸತ್ಯ ನಿಷ್ಠೆ ಜಾತಿ ಜಾತಿಯೊಳು ಪ್ರೀತಿ
ಸಾತಿಶಯ ಭಕ್ತಿ ಗೌರವ–ವುಂಟಲ್ಲಿ ಪಾಪ
ಭೀತಿ ರಕ್ಷೆ ಆತ್ಮ ಗೌರವ || ೫ ||

ಹುಚ್ಚರೆ ಹಳ್ಳಿಯ ಜನರು ? ಹುಚ್ಚರಾಡಿಕೊಂಬವರು
ಹೆಚ್ಚು ಓದಿದವರು ತಾವೆಂಬು–ಗರ್ವಿಷರವರ
ಚುಚ್ಚು ಮಾತಿನಿಂದ ಎಂದೆಂದು || ೬ ||

ನೇಗಿಲ ರೈತನು ಮೊದಲು ಬಾಗಿದ ಬೆನ್ನಿನ ಬಡವ
ತ್ಯಾಗಿ ಸುಜನ ಯೋಗಿಯೆನಿಸನೆ ? ಆ ಪುಣ್ಯ ಜೀವಿ
ನೀಗಿದಸುವ ದೇಹವಾದನೆ ! || ೭ ||

ಶ್ರಮಿಸಿ ದುಡಿವ ಜನರಿಗಿಲ್ಲ ಶಮನಗೊಳಿಸಲುದರ ಬಾಧೆ
ಶ್ರಮಿಸದೇ ಅಧಿಕಾರ ನಡೆಸುವ–ವರ್ಗದ ಜನಕೆ
ಅಮಮ ! ಸ್ವರ್ಗ ಸುಖದ ವೈಭವ || ೮ ||

ಹೊತ್ತುಗೊತ್ತಿಗೆ ಹಿಟ್ಟಿಗಾಗಿ ಹೊಟ್ಟೆ ಹೊರೆಯಲು ಕೆಲಸ ಕಾರ್ಯ
ಸುತ್ತಿಕೊಳಲು ಮೈಗೆ ವಸ್ತ್ರವು–ಸಿಕ್ಕದ ಕಾಲ
ಕಿತ್ತು ತಿನ್ನುತಿಹುದು ಪ್ರಾಣವು || ೯ ||

ಬೆಡಗು ಬಿಂಕ ಬಿನ್ನಾಣದಿ ಅಡಿಗಡಿಗೆ ನಟಿಸಿ ಭಕ್ತಿ
ಯೊಡಲೊಳು ಮತ್ಸರ ಮೋಸವ- ತುಂಬಿದ ಜನ
ಬಿಡದೆ ಹೆಚ್ಚಿ ಬಂತೀ ಪರಿಭವ ! || ೧೦ ||

ರೈತ ಕಾರ್ಮಿಕನು ವಿವಿಧ ರೀತಿ ಕೆಲಸ ಗೈವ ಜನರು
ನೀತಿ ನಡತೆಯಿಂದ ಸೌಖ್ಯದಿ–ಬದುಕಲು ದಾರಿ
ಯೇತರದಿಲ್ಲವೀ ಕಾಲದಿ || ೧೧ ||

ಹೊಟ್ಟೆಪಾಡಿಗಾಗಿ ದುಡಿವ ಕಷ್ಟ ಜೀವಿ ಜನಗಳಿಗೆ
ಹೊಟ್ಟೆ ತುಂಬದಂಥ ಕಾಲವು–ಬಂದಿತು ದೇಶ
ಭ್ರಷ್ಟ ಜನಗಳಿಂದ ನಷ್ಟವು || ೧೨ ||

ವ್ಯಾಪಾರದಿ ಧರ್ಮವಿಲ್ಲ ವ್ಯಾಪಾರ ವ್ಯವಹಾರವೆಲ್ಲ
ವ್ಯಾಪಿಸಿ ದುರ್ಬುದ್ಧಿಯಿಂದಲಿ–ಅತಿ ಲಾಭ ಪಡೆವ
ತಾಪವೇ ಹೆಚ್ಚಿತು ಧರೆಯಲಿ || ೧೩ ||

ಯಾರು ಸತ್ತರೇನು ನಷ್ಟ ಯಾರು ಬದುಕಲೇನು ಲಾಭ ?
ಯಾರಿಗೆ ಯಾರೊ ಪುರಂದರ ವಿಟ್ಠಲ ?–ಎನ್ನುತ ಹಳಿದು
ಸೂರಗೈಯುತಿಹರು ಪ್ರಜೆಗಳ || ೧೪ ||

ಅವರ ಮಾತು ಅವರ ಕೃತಿಯು ಅವರ ನೀತಿ ಅವರ ರೀತಿ
ಅವರವರ ಹೃದಯಕೆ ಹಿತಕರ !–ಹೆಚ್ಚೇನು ಕೊನೆಗೆ
ಅವರ ಕಣ್ಗೆ ಅವರೆ ಸುಂದರ ! || ೧೫ ||

ವ್ಯಾಪಾರ ಧರ್ಮದ ದಿವ್ಯ ಸೋಪಾನವೇ ಮುರಿಯಿತಿಂದು
ತಾಪಬಡುತಿಹ ಬಡವರ–ಬಾಳಿನ ಗೋಳ
ಶ್ರೀಪತಿಯೆ ಬಲ್ಲ ವಿವರ ! || ೧೬ ||

# ಮೂವತ್ತಾರನೆಯ ಸಂಧಿ

## (೧) ನರನಿಗೆ ದೇವ ಭ್ರಮೆ

ಜಗದಪಾರ ಸೃಷ್ಟಿಯೊಳಗೆ ಮೃಗ ಸಮಾನವಿಮರ್ಶ ನರನು
ಜಗದ ದೇವ ತಾನೆಯೆಂಬನು—ವಿಚಾರ ಶೂನ್ಯ
ಬಗೆ ಬಗೆ ವಾದವನು ಮಾಳ್ಪನು ॥ ೧ ॥

ಏನೊಂದರಿಯದ ಮಂದ ಮಾನವನೀ ಜಗಕೆ ಬಂದು
ನಾನು ತಾನೆಂದೆಂಬ ಪರಿಯು ಚರಾಚರದೊ
ಳೇನಿದೇನಿದೇನಚ್ಚರಿಯು ! ॥ ೨ ॥

ತರಣಿ ಬಿಂಬ ಕೋಟಿ ಕೋಟಿ ಕಿರಣಗಳೊಂದೊಂದರಂತೆ
ಮೆರೆಯುತಿಹ ಜೀವರುಗಳಂತೆ !—ತಮ್ಮೊಳು ತಾವೆ
ತರಣಿಯೆಂದು ಭಾವಿಸಿದಂತೆ ! ॥ ೩ ॥

ಹಲವು ಕೋಟಿ ಕೋಟಿ ನರರು ಗೆಲುವು ಸೋಲು ಪಡೆದು ಜಗದಿ
ಬಳಲಿ ಬೆಂದು ಭವದ ಬಾಳಿನ—ಸುಖ ದುಃಖ ಫಲವ
ಮೆಲುತ ಕಣ್ಮುಚ್ಚಿದರು ಬಹು ಜನ ? ॥ ೪ ॥

ಜೀವರೆಲ್ಲರಿಗು ತಮ್ಮ ದೇಹವೇ ತಾವೆಂಬ ಮೋಹ
ಮಾವರಿಸಿ ದಿಕ್ಕುಗೆಡಿಸಿರೆ—ಮುನ್ನುಗ್ಗಿ ನರರು
ದೇವನೇ ತಾವೆಂದು ಭ್ರಮಿಪರೆ ? ॥ ೫ ॥

ವಿಪರೀತ ಮತಿಯು ನರನುಪಜೀವಿಸೆ ಕಣ್ ಬಾಯ್ ಬಿಡುವ
ನುಪಕಾರವೊಂದಿಲ್ಲ ಪರರಿಗೆ—ನೋಡಿರಿ ಇವನ
ಅಪಚಾರ ಭಾವವ ದೇವಗೆ ॥ ೬ ॥

ತನ್ನ ತಾನು ತಿಳಿಯುವವ ಅನ್ಯರನೂ ತಿಳಿಯದವ
ಜನ್ಮ ಮರಣ ಸುಳಿಗೆ ಬಿದ್ದವ—ನರಹುಳು ತಾನೇ
ಉನ್ನತಾತ್ಮನೆಂದು ಭ್ರಮಿಸುವ ॥ ೭ ॥

ಚಿತ್ತ ಸಮತೆಯಿರ್ಪ ಮನುಜನೆತ್ತಲು ತಾ ಜಯಿಸುವನು
ಗೊತ್ತು ಗುರಿ ಬಾಳನರಿಯುತ—ಗುರು ಹಿರಿಯರಿಂದ
ಸಾತ್ವೀಕ ಮಾರ್ಗದಿ ನಡೆಯುತ || ೮ ||

ಸಹನೆ ಬೇಕು ಜೀವರಿಗೆ ಸಿಹಿಯು ಕಹಿಯು ಸೇವಿಸಲು
ಅಹರಹದಿ ಜಗದೀಶನಂಘ್ರಿಯು—ನಾರಾಧಿಸುತ್ತ
ಲಿಹಪರದಿ ಸುಖಿಸಲು ಕಂಡೆಯ ! || ೯ ||

## (೨) ವಿವಿಧ ಸಂಸ್ಕಾರ—ಪ್ರತಿಭೆ

ಪ್ರತಿಯೊಬ್ಬ ಮಾನವನಿಗೊಂದು ಪ್ರತಿಭ ಹುಟ್ಟಿನಿಂದ ಬಂದು
ಅತಿಶಯ ಕಾಂತಿಯನು ಬೀರುತ—ಲಿರ್ಪುದು ಪರ
ಹಿತ ಸುಖಪ್ರದವಾಗಿ ಸಂತತ || ೧೦ ||

ಜೀವ ಜೀವರಿಗೆ ಭಿನ್ನ ಭಾವ ರುಚಿ ಗುಣ ಕರ್ಮ
ಈ ವಸುಧೆಯಲ್ಲಿ ನೋಡಲು—ಕಾಂಬುದು ದೇವ
ದೇವನ ಸೃಷ್ಟಿಯೊಳೆಲ್ಲೆಲ್ಲೂ || ೧೧ ||

ತಿಳಿಯಬೇಕು ಮಾನವ ತನ್ನೊಳಗಿನ ವಿಶೇಷ ಬಲವ
ನಲವಿನಿಂದದನು ಲೋಕದ—ಹಿತಾರ್ಥವಾಗಿ
ಬಳಸಿ ತಾನೂ ಸುಖಿಪುದು ಸದಾ || ೧೨ ||

ಒಬ್ಬ ಕವಿಯೊಬ್ಬ ಶೂರನೊಬ್ಬ ಶಿಲ್ಪಿಯೊಬ್ಬ ಮಂತ್ರಿ
ಒಬ್ಬ ಗುರುವೊಬ್ಬ ಸೇವಕ—ಕೃಷಿಕ ವಣಿಕ
ನೊಬ್ಬ ವೈದ್ಯನೊಬ್ಬ ಗಾಯಕ || ೧೩ ||

ಮಾನವನ ಕಾಯಕವು ತಾನಿರ್ಪ ಸ್ವಭಾವದಂತೆ
ಜ್ಞಾನ ಗುಣ ಬುದ್ಧಿ ಪೂರ್ವಕ—ನಡೆಯುವುದಿದೇ
ಜಾಣತನ ಸೃಷ್ಟಿಯಾ ಲೋಕ || ೧೪ ||

ಒಬ್ಬನ ಸ್ವಭಾವಕೆ ಮತ್ತೊಬ್ಬನ ಸ್ವಭಾವ ಬೇರೆ
ಒಬ್ಬನಂತೆ ಒಬ್ಬನಿಲ್ಲವು—ಹೀಗಿದ್ದರೂ ತಾ
ನೊಬ್ಬನೊಬ್ಬನಿಗಾಶ್ರಯವು || ೧೫ ||

ಇಷ್ಟಾವರು ಶಿಷ್ಟ ಜನ ದುಷ್ಟ ಜನ ತಮ್ಮ ತಮ್ಮ
ಇಷ್ಟ ಕಾರ್ಯಗಳ ಮಾಳ್ಪರು–ಆ ಫಲಕೆ ತಕ್ಕ
ಕಷ್ಟ ಸುಖಗಳನುಣುವರು ॥ ೧೬ ॥

ಸತ್ವ ರಜ ತಮ ಗುಣ ಸುತ್ತಿಹುದು ಜೀವರನು
ಎತ್ತೆತ್ತ ಹೋದರು ಬಿಡದು–ಅವರವರಿಂದ
ತತ್ತತ್ಕರ್ಮ ಮಾಡಿಸುವುದು ॥ ೧೭ ॥

ಮಾನವ ಸಮಾಜದೇಳ್ಗೆಗೇನೆಲ್ಲ ಸಂಸ್ಕಾರಬೇಕು
ಮಾನವನ ಹೃದಯದ ವಿಕಾಸಕೆ–ಭಾವೈಕ್ಯತೆಗೆ
ಮಾನವನ ವಂಶದುದ್ಧಾರಕೆ ॥ ೧೮ ॥

# ಮೂವತ್ತೇಳನೆಯ ಸಂಧಿ

## ಹೆಣ್ಣಿನ ಬಾಳು

ಹೆಣ್ಣಿನ ಬಾಳಲಿ ಸದಾ ಕಣ್ಣೀರ ಕಾಲುವೆಯಿಹುದು
ಕಣ್ಣಿಲ್ಲದವನಿಗೆ ಕೊಟ್ಟರೆ–ಲೋಕದೊಳಿದ
ಬಣ್ಣಿಸೆ ಶಕ್ಯವೆ ನೆನೆದರೆ ! ॥ ೧ ॥

ಮಕ್ಕಳ ಪಡೆದು ಮುಂಡೆ ಅಕ್ಕರದಿ ಸಾಕಿ ಸಲಹಿ
ಅಕ್ಕರ ವಿದ್ಯೆಯ ಕಲಿಸಿ–ಕೊನೆಯೊಳವರ
ಸಿಕ್ಕಿದವರಿಗೆ ಸೇರಿಸಿ ॥ ೨ ॥

ವಿಹಿತದಿ ಸತಿ ಪತಿಗಳು ಸಹಜೀವನ ನಡೆಸಲೆಂದು
ಅಹರಹದಿ ಬಯಸಿ ಹಿರಿಯರು–ಕೊಟ್ಟಂಥ ಹೆಣ್ಣಾ
ಸಹನೆಯಿಂದ ನಡೆಸಲರಿಯರು ॥ ೩ ॥

ಹೆಣ್ಣು ತಾಯಿಯಾಗಿ ಬಂದು ಹೆಣ್ಣು ಪತ್ನಿಯಾಗಿ ಬಂದು
ಹೆಣ್ಣು ಮಗಳ ರೂಪದಿ ಬಂದು–ಪರಿಕಿಸುವಳು
ಹೆಣ್ಣಿನಿಂದಲ್ಲವೆ ಜಗವಿದು ? ॥ ೪ ॥

ಹೆಣ್ಣಿಗೊಂದು ಗಂಡು ಬೇಕು ಗಂಡಿಗೂ ಹೆಣ್ಣೊಂದು ಸಾಕು
ತನ್ನ ಹೆಣ್ಣ ಬಿಟ್ಟು ಪರರ–ಹೆಣ್ಣಿಗೆ ಸೋಲ್ವ
ಹೆಣ್ಣಿಗನಿಗಿಲ್ಲವಿಹಪರ ! ॥ ೫ ॥

ಸತಿಯ ಮನವ ಕೆಡಿಪ ಪತಿಯು ಪತಿಯ ಮನವ ಕೆಡಿಪ ಸತಿಯು
ಪತಿ ಪತ್ನಿಯರೇ ಅಲ್ಲ ಲೋಕದಿ–ಅವರೊಂದು ಬಗೆಯ
ಹಿತಶತ್ರು ಸಂಬಂಧ ಜಗದಿ ॥ ೬ ॥

ಸತಿಯ ನೇಮವಿರದ ಪತಿಯು ಪತಿಯ ನೇಮವಿರದ ಸತಿಯು
ಸತಿ ಪತಿಯರಾಗುವರೆಂತು ?–ತಿಳಿಯಲು ಪರವು
ಪತಿತರವರ ನಂಬುವುದೆಂತು ? ॥ ೭ ॥

ಸತಿ ಪತ್ನಿಯರನಗಲಿಸುವ ಮತಿವಿಕಳರೆಂದೆಂದಿಗು
ಹಿತವನೆಣಿಪರೆ ಇವರಿಗೆ ?–ಕಡೆಯಲಿ ದುಸ್ಸಂ
ಗತಿಯೇ ಗತಿ ಇವರ ಬಾಳಿಗೆ || ೮ ||

ವಿರಹ ದುಃಖವೆಂಬುದೊಂದು ಪರಿಪರಿ ವಿಧದಲಿ ನರನ
ಪರಿಕಿಸಿ ಮರುಳನ ಮಾಳ್ಪುದು–ಇದನರಿತ ಜಾಣ
ಮರುಗನಿದಕೆ ಸೋಲನೆಂದೆಂದು || ೯ ||

ಸಖ ವಿಯೋಗ ಸತಿ ವಿಯೋಗ ಸಕಲ ಬಂಧು ಸುತ ವಿಯೋಗ
ಸಖಿ ಶಿಷ್ಯ ಸದ್ಗುರು ವಿಯೋಗವು-ಸಂಪದ ವಿಯೋಗ
ಸಕಲರ ಬಾಳಿನಲಿ ಬರ್ಪವು || ೧೦ ||

ಪರ ನಾರೀ ಸೋದರರೆ ಎಲ್ಲ ! ಪರನಾರಿಯರ ಕಂಡರಾಸೆ !
ಪರಿಪರಿ ತತ್ವಗಳ ಬೋಧನೆ–ಬಾಯಲಿ, ತತ್ವಾ
ಚರಣೆಯಲಿ ಡಾಂಭಿಕ ನಟನೆ ! || ೧೧ ||

ಆವ ದೇವ ಕಾವನಿವರನಾವ ಗುರುವು ಕೃಪೆಯ ಕರೆವ
ನಾವ ಸುಗುಣವಿಹುದೀ ಜನರಲಿ ? ಉದ್ಧರಿಸಲು
ಕೋವಿದರೆ ಇವರು ಜಗದಲಿ || ೧೨ ||

## ಮೂವತ್ತೆಂಟನೆಯ ಸಂಧಿ

### (೧) ಬಾಹ್ಯಾಡಂಬರ

ನೇಮ ನಿಷ್ಠೆ ಇಲ್ಲದೆಯೆ ಸ್ವಾಮಿಯ ಭಜಿಪರ ನೋಡು
ಕಾಮದ ಕಣ್ಣಿನ ಜನರನು–ಆಡಂಬರದ
ತಾಮಸ ಗುಣದ ನರರನು || ೧ ||

ಮಾರ್ಗದರ್ಶನವದೇಕೆ ? ಅರ್ಗೆ ನಾನು ಕಡಿಮೆಯೆಂದು
ಕಾರ್ಗತ್ತಲೆ ಭವದ ಕ್ಷಣಿಕ–ದೀಪದೊಳವಾ
ಮಾರ್ಗ ಹೆಜ್ಜೆಯಿಡುವ ಕ್ಷುಲ್ಲಕ || ೨ ||

ಸುಳ್ಳು ಕಳ್ಳತನಗಳಿಂದ ಜೊಳ್ಳು ಜೀವನಕೆ ಜೋತು
ಡೊಳ್ಳು ತುಂಬಿ ತನ್ನನ್ನು ತಾನೇ–ಹೊಗಳಿಕೊಂಬ
ಗೆಳ್ಳನೀರು ಬಿಡುವರ ಕಾಣೆ || ೩ ||

ಮಳೆಯು ಬಿಸಿಲು ಹಿಮದ ಗಾಳಿ ಬೆಳೆ ಸಮೃದ್ಧಿ ಸೂರ್ಯ ಚಂದ್ರ
ರಿಳೆಗೆ ಕೊಡುವ ಬೆಳಕು ಕಾಂತಿಗೆ–ಕಾರಣನೆ ನರ ?
ಹುಳುವಿತ ಸಿಕ್ಕಿಹನು ಭ್ರಾಂತಿಗೆ || ೪ ||

ತನ್ನಿಂದಲೇ ಲೋಕವೆಂಬ ಕುನ್ನಿಮಾನವನು ನೋಡು
ತನ್ನ-ಲೋಕದಂತರವನು–ತಿಳಿಯದ ದುಷ್ಟ
ನಿನ್ನೆಂತು ಪಾಲಿಸುವ ಜಗವನು ? || ೫ ||

ಜಗವ ನೋಡಿ ನಾವು ನಗಲು ಜಗವೇ ನಮ್ಮ ನಗುತಲಿಹುದು
ಜಗದ ಜೀವಕೋಟಿ ಚೇಷ್ಟೆಗೆ–ಕಾರಣರೆ ನಾವು
ಜಗದೀಶನದ್ಭುತ ಲೀಲೆಗೆ || ೬ ||

## (೨) ನಾಸ್ತಿಕವಾದ

ದೇವರಿಲ್ಲವೆಂಬರುಂಟು ದೇವರ್ನೇ ನಾನೆಂಬರುಂಟು
ದೇವನ ನಿಂದಿಸುವರುಂಟು—ಈ ಮೂರು ಬಗೆಯ
ದೇವ ವೈರಿ ಮಾನವರುಂಟು || ೭ ||

ದೇವನ ಹೆಸರಿನಲ್ಲಿ ನೋವ ಪರರಿಗುಂಟುಮಾಡಿ
ಯಾವ ನೀಚ ಕೃತ್ಯವಾದರು—ಮಾಡುವರುಂಟು
ದೇವನ ಭಕ್ತಿಪ ಭಕ್ತರು || ೮ ||

ವಿಘ್ನ ಮಾಡುವವರೆ ಬಹಳ ಸುಜ್ಞಾನ ಕರ್ಮದ ಪಥಕೆ
ಅಜ್ಞಾನವೆ ಇದಕೆ ಕಾರಣ—ವಲ್ಲದಿನ್ನೇನು ?
ಪ್ರಜ್ಞೆಯಿವರಿಗಿರದ ಕಾರಣ || ೯ ||

ಪಾವನತ್ವವಿಲ್ಲದಿಹ ಜೀವನವೆ ಸಾಗಿಹುದು
ನೋವು ಸಾವು ಸಂಕಟಗಳು—ಹೆಚ್ಚಿಹವೆಲ್ಲೂ
ಕಾವ ದೇವ ಕೋಪಿಸಿರಲು || ೧೦ ||

ಶಿಷ್ಟ ರೀತಿಯಿಂದ ತಮ್ಮ ಇಷ್ಟ ಕಾರ್ಯಗಳನು ಮಾಡಿ
ತುಷ್ಟಿಯ ಜೀವನವ ನಡೆಸಿ—ಇಷ್ಟ ಮಿತ್ರರ
ಗೋಷ್ಠಿಯೊಳು ಬದುಕ ತೂಗಿಸಿ || ೧೧ ||

ಮನೆ ಮಂದಿ ಮಕ್ಕಳ ಸಲಹಿ ಜನವಂದಿಗನೆನಿಸಿ ನಾಡ
ಜನರ ಪ್ರಗತಿಗಾಗಿ ತನು ಮನ—ಸಂಪತ್ತುಗಳನು
ವಿನಿಯೋಗಿಸುವವನೆ ಪಾವನ || ೧೨ ||

ನಾಡು ನುಡಿಯ ಜನರ ಮೇಲ್ಮೆಗಾಡಿ ಮಾಡುವ ಪುಣ್ಯ ಕಾರ್ಯ
ಬೇಡವೆನ್ನುವವರೇ ಬಹಳ !—ಈ ಕಾಲದೊಳಗೆ
ನಾಡ ಹಿತವನೆಣಿಪರೇ ವಿರಳ ! || ೧೩ ||

## (೩) ಭಂಡ ಜೀವನ

ಲೋಕ ಹಿತವು ನಮಗೇಕೆಂದು—ಲೋಕ ತಿದ್ದಲಾಗದೆಂದು
ಲೋಕವ ಮೆಚ್ಚಿಸಲೇಕೆಂದು—ವಾದಿಸುವಂಥ
ಕಾಳು ಜನರು ಹೆಚ್ಚಿಹರಿಂದು || ೧೪ ||

ಕಪಟ ಮೋಸ ಸ್ವಾರ್ಥವೆಂಬ ವಿಪರೀತ ಬುದ್ಧಿಯ ಜನರು
ಅಪಕಾರವನೇ ಮಾಡಿ ಪರರಿಗೆ—ಲೋಕವು ಕೆಡಲು
ಅಪಹಾಸ್ಯ ಮಾಡುವರಿಂದಿಗೆ || ೧೫ ||

ಅನ್ಯಾಯವಕ್ರಮದಿಂದಲನ್ಯರ ಸ್ವತ್ತನು ದೋಚಿ
ತನ್ನದೆನ್ನುತಿಹ ಕಾಲವು—ಬಡವರಿಗನ್ನ
ತಿನ್ನಲಿಲ್ಲವೇನನ್ಯಾಯವು ? || ೧೬ ||

ಇಂದಿಗೆ ಬಂದದ್ದೆ ಲಾಭ ಮುಂದಿ ಸತ್ತರೇನು ನಮಗೆ
ಮುಂದಕೆಂಥ ಸಮಯ ಬರುವುದೆ ?—ಎನ್ನುವ ಕೆಟ್ಟ
ಮಂದಿ ಹೆಚ್ಚಿ ನೇಳ್ವುದೇನಿದೆ ? || ೧೭ ||

ಇದ್ದ ಮಾತು ಹೇಳಿದರೆ ಕ್ರುದ್ಧರಾಗುವಂಥ ಕಾಲ
ಕದ್ದು ಪರರ ವಿತ್ತಾದಿಗಳ—ಕೊಬ್ಬುತಲಿಹರು
ಹದ್ದು ಹಾವ ಹೊಡೆವಂತೆ ಛಲ ! || ೧೮ ||

ಏನೆಂದು ಬಣ್ಣಿಸಲಕಟ ! ಮಾನ ಬಿಟ್ಟ ಜನರ ನಡತೆ
ಶ್ವಾನನಂತೆ ದಿನವ ಕಳೆಯುತ—ಮೆರೆವರು ತಾವು
ಮಾನವರೆಂಬುದನೆ ಮರೆಯುತ || ೧೯ ||

# ಮೂವತ್ತೊಂಭತ್ತನೆಯ ಸಂಧಿ

## ಬುದ್ಧಿ ಮಾತು

ಹೊತ್ತು ಕಳೆದು ಮೃತ್ಯುವಿಗೆ ತುತ್ತಾಗುವ ಮುನ್ನ ಮನದಿ
ಉತ್ತಮ ಶ್ಲೋಕನ ನೆನೆಯೊ–ಮಾನವ ನೀನು
ಮರ್ತ್ಯನಲ್ಲವೇನೊ ತಿಳಿಯೊ ॥ ೧ ॥

ಕರುಣಾಸಾಗರನ ನೀನು ಸ್ಮರಣೆ ಮಾಡಬೇಕೊ ಪ್ರಾಣಿ
ಪರಿಪರಿ ಭಾಗ್ಯಗಳ ನೀಡುವ–ಇಹಪರದಲಿ
ಕರುಣದಿಂದ ನಿನ್ನ ಸಲಹುವ ॥ ೨ ॥

ಬಂದ ಭಾಗ್ಯವೇನೊ ನಿನಗೆ ಮುಂದುಮತಿಯಾಗಿ ನೀನು
ಹಿಂದು ಮುಂದು ಕಾಣದೆ ಕಾಲ–ಕಳೆಯುತ ಬರೆ
ಮುಂದೆ ಗತಿ ಯಾರಹರೊ ಗಾವಿಲ ॥ ೩ ॥

ಅಂತು ಇಂತು ಎಂತಾದರು ಸಂತೈಸಲು ಬೇಕೊ ಭವದ
ಕಂತೆ ಹೊಣೆಯು ಬಹಳ ದೊಡ್ಡದೂ–ಇದ ತೀರಿಸಲು
ಅಂತರಂಗ ಶುದ್ಧಿ ಬೇಹುದೊ ॥ ೪ ॥

ಸಂತಸದ ಮನದಿಂದಲಂತರಾತ್ಮನನ್ನು ಸದಾ
ಚಿಂತನೆಯ ಮಾಡುತೆಂದಿನ–ಗೃಹಕೃತ್ಯಗಳ
ಪಂಥ ಪಾಡು ನಡೆಸೂ ದಿನದಿನ ॥ ೫ ॥

ಜರಿಯಬೇಡ ದೈವವನ್ನು ಮರೆಯಬೇಡ ನಿನ್ನ ಗುರುವ
ತೊರೆಯಬೇಡ ಸಜ್ಜನರನು–ಸತ್ಕಾರ್ಯಕೆ ಹಿಂ
ಜರಿಯಬೇಡ ಮಾಡು ಮನವನು ॥ ೬ ॥

ದೂರ ದೂರವಾಗಲಿ ನಿನ್ನಾರುಭಟೆಗಳು ಅಧಿ
ಕಾರ ಮದ ಡಂಭಾಚಾರವು–ಮನವು ನಿರ್ವಿ
ಕಾರವಾಗಿರಲಿ ಸತತವು ॥ ೭ ॥

ಸ್ವಾಮಿ ಸೇವೆಯಲ್ಲವೇನೊ ನೇಮದಿಂದ ಬದುಕುವುದು
ಪ್ರೇಮ ಜೀವನದ ಬಂಧನ—ಅವನಿಗೆ ನಿನಗೆ
ಈ ಮರ್ಮವ ತಿಳಿಯೆಲೊ ಜಾಣ || ೮ ||

ಅವನ ನಿನ್ನ ಸಂಬಂಧವು ಅವನಿಯಲಿ ಫಲಿಸಲೆಂದು
ಅವನು ನಿನ್ನ ಕಳುಹಿಂದುದಕೆ—ಮೂಢನೆ ಇಂದು
ಅವನನೇ ನೀ ಮರೆತೆಯೇತಕೆ ? || ೯ ||

ಅವನ ಸೇವೆ ಮಾಡೆ ನೀನು ಅವನೇ ನಿನ್ನ ಸಮಯಕಹನು
ಭವದ ಕಡಲ ದಾಟಿಸುವನೊ—ಸೌಭಾಗ್ಯಗಳ
ಸಿವಹವಿತ್ತು ಸಂತೈಸುವನೊ || ೧೦ ||

ನಿನ್ನೊಳಗೆ ತಿಳಿದು ನೋಡೊ ಬನ್ನಬಡುವ ಬದುಕಿನೊಳಗೆ
ಇನ್ನು ಸಾರವಾವುದೆಂಬುದ—ಈ ವಿಶ್ವದೊಳಗೆ
ನಿನ್ನ ಬಾಳ ಗುರಿಯೇನೆಂಬುದ || ೧೧ ||

ಒಬ್ಬೊಬ್ಬರು ಬೇರೆ ಬೇರೆ ತಬ್ಬಿಬ್ಬುಗೊಳ್ಳದಿರಿದಕೆ
ಅಬ್ಬಬ್ಬ ! ಈ ಜಗದ ಸೃಷ್ಟಿಯು—ಅದ್ಭುತವದರೊ
ಳೊಬ್ಬನು ನೀ ನರಪ್ರಾಣಿಯು || ೧೨ ||

ಜಗವು ನಿನ್ನಾಧೀನವೆಂತೊ ಜಗದ ಮೂಲೆಯೊಳು ನೀನೊಬ್ಬ
ಜಗದ ಜನರು ನಿನ್ನ ದಾಸರೆ ?—ನಿನ್ನ ಕುತರ್ಕ
ನಗೆಪಾಟಲಾದೀತು ಮೆರೆದರೆ ! || ೧೩ ||

ಜಗವ ಜನರನಾಳ್ವೆನೆಂದು ಬೊಗಳುವುದು ನ್ಯಾಯವೇನೊ
ಕೆಗಳಿ ದಾನ ಧರ್ಮ ಕಾರ್ಯವ—ಜಗದೀಶ ನಿನ್ನ
ಹೊಗಿಸದೆ ಬಿಡನೊ ನರಕವ ! || ೧೪ ||

ದೇವದೇವನಾರಾಧನೆ ದೇವ ಗುರು ಸ್ತೋತ್ರ ಭಜನೆ
ದೇವ ಮನೋಭಾವ ವರ್ತನೆ—ಇವುಗಳು ನಿನಗೆ
ಈವುದಯ್ಯ ಪರಮಾರ್ಥವನೆ ! || ೧೫ ||

---

## ನಲವತ್ತನೆಯ ಸಂಧಿ

### ಪ್ರಕೃತಿಯಿಂದ ಪಾಠ

ಮಳೆ ಗಾಳಿ ಛಳಿ ಬಿಸಿಲು ಬೆಳಕು ಇಳೆಯು ಜೀವರ ಸೌಖ್ಯಕಾಗಿ
ಫಲವ ಕೊಡುವ ಶ್ರೀಶ ಕಂಡೆಯ—ನೀನೇನ ಮಾಳ್ಪೆ
ತಿಳಿಯುವೆ ನೀಯೆಂತೀ ವಿಸ್ಮಯ ! || ೧ ||

ಜಗದ ಚಕ್ರ ಸುಗಮವಿಹುದು ರಾತ್ರಿ ಹಗಲು ಚಂದ್ರ ಸೂರ್ಯ
ನಗುವ ಸಸ್ಯ ಖಗಮೃಗಾವಳಿ—ರಾಜಿಸುತಿಹವು
ಸೊಗಸು ಚಿತ್ರವಿದನು ನೀ ತಿಳಿ || ೨ ||

ಒಂದೇ ವೃಕ್ಷದಲ್ಲಿ ಹಲವು ಕೊಂಬೆ-ರೆಂಬೆ ಹೂವು ಕಾಯಿ
ಒಂದಕೊಂದು ಹೊಂದಿರುತ್ತಲಿ- ಬೆಳೆಯುತ ತಮ್ಮ
ಸಂದ ಕೆಲಸ ಗೈವ ಪರಿಯಲಿ || ೩ ||

ಒಂದೇ ವೃಕ್ಷದಾಶ್ರಯದಿ ಬಂದು ಜನರು ಪಕ್ಷಿ ಮೃಗವು
ನಿಂದು ನೆರಳು ಹಣ್ಣು ಕಾಯ್ಗಳ—ಸವಿಯುವ ತೆರದಿ
ಒಂದೇ ಹಲವಕಾಯ್ತು ಬೆಂಬಲ || ೪ ||

ಒಂದೇ ವೃಕ್ಷನಡಿಯಲ್ಲಿ ನಿಂದ ತಾಯಿಬೇರು ತನ್ನ
ಕಂದ ಬೇರುಗಳ ಮೂಲಕ—ಸಾರವನೆಳೆದು
ನಿಂದ ವೃಕ್ಷಕೆರೆವ ಕೌತುಕ || ೫ ||

ಒಂದೇ ವೃಕ್ಷದಿಂದ ಬೀಜವೊಂದೊಂದು ತಾ ವೃಕ್ಷವಾಗಿ
ನಿಂದು ಮುಂದಕಾಶ್ರಯವೀವ—ರೀತಿಯಲಿ ಜಗ
ಮುಂದೆ ಸಾಗುತಿಹುದೊ ಮಾನವ || ೬ ||

ವೃಕ್ಷ ಜಾತಿಯೆಷ್ಟು ನೋಡು ಪಕ್ಷಿ ಜಾತಿಯೆಷ್ಟು ನೋಡು
ಲಕ್ಷ ಹದಿನೆಂಟು ಯೋನಿಯ—ಜೀವರನು ನೋಡು
ಕುಕ್ಷಿ ತುಂಬಿಕೊಳ್ವ ಪರಿಯ || ೭ ||

ಪ್ರಕೃತಿ ದೇವಿ ನಮ್ಮ ತಾಯಿ ಶಕುತಿವಂತೆ ಧರಣಿ ಮಾತೆ
ಸುಕೃತ ಜೀವಿಗಳ ಕಾಯಳೆ ?–ದುಷ್ಕೃತಿ ಗೈವ
ವಿಕೃತ ಜೀವರನು ದಹಿಸಳೆ ? ॥ ೮ ॥

ಸದ್ಗುಣವ ಬೆಳಸಿಕೊಳ್ಳೊ ಸದ್ಗುರುವ ಹುಡುಕಿಕೊಳ್ಳೊ
ಚಿದ್ಘನರೂಪನ ದೇವನ–ಚಿಂತಿಸೊ ಭಗ
ವದ್ಗೀತೆಯ ಸುಧೆಯ ಕರೆವನ ॥ ೯ ॥

ಗೆಲ್ಲಬೇಕಾದರೆ ಭವದಲ್ಲಿ ನೀನು ಇನ್ನು ಮುಂದೆ
ಸಲ್ಲದ ಕಾರ್ಯವ ನಿಲ್ಲಿಸೊ–ಈ ದಿನದಿಂದ
ಕ್ಷುಲ್ಲಕ ಬುದ್ಧಿಯ ತ್ಯಜಿಸೊ ॥ ೧೦ ॥

ಕಾಕು ಮನುಜರ ಸಂಗವೇಕೆ ಮಾಡುವೆಯೊ ನೀನು
ನಾಕ ಸುಖವ ನಿನಗೆ ಕೊಡುವರೆ ?–ಅವರ ಅವಿ
ವೇಕ ಬೋಧೆಗೆ ಕಿವಿಯ ಕೊಡುವರೆ ? ॥ ೧೧ ॥

ಧೂರ್ತನಾಗಿ ಮೆರೆಯಬೇಡ ಆರ್ತ ಜನರ ಮರೆಯಬೇಡ
ಸಾರ್ಥಕಪಡಿಸಲು ನಿನ್ನಯ–ಜೀವನವ ನಿಃ
ಸ್ವಾರ್ಥದಿ ಸಲ್ಲಿಸೊ ಸೇವೆಯ ॥ ೧೨ ॥

ಪ್ರಾಣಿ ದಯೆ ದೊಡ್ಡದಯ್ಯ ಪ್ರಾಣಿ ಹಿಂಸೆ ಸಲ್ಲದಯ್ಯ
ಪ್ರಾಣ ತೆಗೆಯದಿರೊ ಬಡವರ–ರಕ್ತವ ಹೀರಿ
ಪ್ರಾಣವ ನೀ ಬಿಡುವೆ ಎಚ್ಚರ ! ॥ ೧೩ ॥

ಲೋಕಗತಿ ಜೀವ ಭಾವ ಶೋಕ ಮೋಹ ಮದವಜ್ಞಾನ
ಆಕರ್ಷ ಜೀವನದ ಮರ್ಮವ–ತಿಳಿದು ಬೇಗ
ಶೇಖರಿಸೊ ಪುಣ್ಯ ಸಾರವ ॥ ೧೪ ॥

# ನಲವತ್ತೊಂದನೆಯ ಸಂಧಿ

## ದೇವರಲ್ಲಿ ಶರಣಾಗತಿ

ಯಾವ ಕಾರಣವೊ ಏನೊ ದೇವ ನಿನ್ನ ಇಚ್ಛೆಯಂತೆ
ಈ ವಸುಧೆಯಲ್ಲಿ ಹುಟ್ಟಿದೆ–ನರಮೃಗವಾಗಿ
ಯಾವ ಜ್ಞಾಪಕವು ಇಲ್ಲದೆ ॥ ೧ ॥

ಯಾರಿಗೆ ನಾ ಜನಿಸಿದೆನೊ ! ಯಾರೊ ಎನ್ನ ಮಾತೆ ಪಿತರು
ಯಾರೊ ಏನೋ ಒಂದೂ ತಿಳಿಯೆನೊ–ಈ ಪರಿಯಲಿ
ಧಾರುಣಿಯ ಮೇಲೆ ಬಂದೆನೊ ॥ ೨ ॥

ರಕ್ಷಿಸಿದವಳೆ ತಾಯಿ ಶಿಕ್ಷಿಸಿದವನೆ ತಂದೆ
ಅಕ್ಷರ ಕಲಿಯುವ ವೇಳೆಗೆ–ಎನಗೆ ಸ್ವಲ್ಪ
ಲಕ್ಷ್ಯ ಬಂದಿತ್ತವರ ಕಡೆಗೆ ॥ ೩ ॥

ಲಾಲನೆ ಪಾಲನೆಯಲಿ ಲೀಲೆಯಿಂದಲೆನ್ನ ಪೊರೆದ
ವೇಳೆಯೊಳಗವರು ಕಲಿಸಿದ–ಮಾತುಗಳು ಮುಖದಿ
ಓಲಾಡುತಿರ್ದವು ವಿಧ ವಿಧ ! ॥ ೪ ॥

ಶೈಶವಾವಸ್ಥೆಯಲಿ ಕಳೆದವೇಸೋವರ್ಷಗಳು ಆಗರ
ವಾಸನೆಯಿಲ್ಲವೊ ನನಗೆ–ಗೊಂಬೆಯುವೊಲು
ವೇಷ ಕೊಟ್ಟು ಕುಣಿದ ಬಲು ಬಗೆ ! ॥ ೫ ॥

ಪ್ರಾಣಿ ಪಕ್ಷಿಗಿಂತ ಕೇಡು ನಾನು ಹುಟ್ಟಿ ಬೆಳದ ರೀತಿ
ಗೌಣವಾಯಿತದುವೆ ಇಂದಿಗೆ–ನಾ ಬೆಳೆದು ಬೆಳೆದು
ಜಾಣನೆನಿಸಲಿಲ್ಲವಿಂದಿಗೆ ॥ ೬ ॥

ಚಿಕ್ಕಂದಿನ ದಿನಗಳಲ್ಲಿ ಅಕ್ಕಪಕ್ಕ ವಾಸವಾಳ್ವ
ಮಕ್ಕಳ ಜೊತೆಯೊಳಾಡುತ–ಅಂತಿಂತು ಬಳೆದು
ನಕ್ಕುನಲಿದೆ ದಿನವ ಕಳೆಯುತ ॥ ೭ ॥

ಯಾವುದೊ ದೇಶಕೆ ಬಂದು ಯಾವುದೊ ಭಾಷೆಗೆ ಸಂದು
ಯಾವುದೊ ವೇಷವ ಕಟ್ಟುತ–ದೊಡ್ಡವರಿಂದ
ಯಾವುದೊ ವಿದ್ಯೆಯ ಕಲಿಯುತ ॥ ೮ ॥

ನನ್ನಯ ಪ್ರಾಚೀನದಂತೆ ನನ್ನಯ ಸಂಸ್ಕಾರದಂತೆ
ನನ್ನ ವಿದ್ಯೆ ಬುದ್ಧಿ ಫಲಿಸಲು–ಯೌವನದಲಿ
ನನ್ನ ನಾನೇ ಮರೆತೆ ಜಗದೊಳು ! ॥ ೯ ॥

ವಿದ್ಯೆ ರೂಪ ಶ್ರೀಮಂತಿಕೆ ಬುದ್ಧಿ ಕುಶಲಕರ್ಮಗತಿ
ಯಿದ್ದುದರೊಳಗೆ ಗರ್ವಿಸಿ–ಆ ಕ್ಷೇತ್ರದಲ್ಲಿ
ಗೆದ್ದವನೇ ನಾನೆಂದು ಭಾವಿಸಿ ॥ ೧೦ ॥

ಹೆಡ್ಡ ದೇಹ ಬೆಳೆಸಿಕೊಂಡು ಅಡ್ಡ ಸುಳಿದ ಹೆಣ್ಣುಗಳ
ಗುಡ್ಡೆಕಣ್ಣಿನಿಂದ ಹಾರಿಸಿ–ನಗುತಲಿ ಮನದಿ
ಅಡ್ಡದಾರಿಗಳನೆ ಯೋಚಿಸಿ ॥ ೧೧ ॥

ಬಂದ ಹೆಣ್ಣುಗಳನೆಲ್ಲವೊಂದೊಂದಾಗಿ ನೋಡಿ ನೋಡಿ
ಒಂದೊಂದು ಕುಂದಿಟ್ಟು ವರ್ಜಿಸಿ–ಕಾರಣ ಕೇಳೆ
ತಂದೆ ತಾಯಿ ಬೆರಳ ತೋರಿಸಿ ॥ ೧೨ ॥

ಮನಕೊಪ್ಪಿದ ಹೆಣ್ಣುವರಿಸಿ ದಿನ ನಿತ್ಯದ ಬದುಕ ನಡೆಸಿ
ತನು ಸಾರ್ಥಕ ಪಡೆಯೆ ಯೋಚಿಸಿ–ಅಡಿಯಿಡುತಿರೆ
ಜನುಮದಾಪ್ರಾರಬ್ಧ ಕಾಡಿಸಿ ॥ ೧೩ ॥

ಹೋಗಲೀಸದಾವಕಡೆಗೆ–ಬೇಗುದಿ ಪಡುವಂತಾಯ್ತು
ತೂಗುಯ್ಯಾಲೆಯಾಯಿತೀಮನ–ಮುಂದಿನ ಬಾಳು
ನಾಗಿಸುತ್ತ ಮಾಡೆ ಸಾಧನ ॥ ೧೪ ॥

ಬೆಳಕು ಹರಿಯೆ ಚಿಂತೆಯುದಿಸಿ ಬೆಳಕು ದೀಪವಾರುವನಕ
ಛಳುಕು ನರಕೆ ಹೊಡೆದ ಪರಿಯಲಿ–ದುರ್ವಿಷಯಗಳ
ಕಲುಷದಂತಃಕಲಹ ಮನದಲಿ ॥ ೧೫ ॥

ಅಸಹನೆ ಅಸಹ್ಯ ಮಾತು ಅಸುರ ವರ್ತನೆಗಳ ಚಿತ್ರ
ವಿಷಮ ಚಿತ್ತನನ್ನು ಮಾಡಿಯೆ–ಎನ್ನನು ಪೂರ್ಣ
ಅಸಮರ್ಥನ ಮಾಡಿತೊ ದೊರೆಯೆ ! ॥ ೧೬ ॥

ಈತಿ ಬಾಧೆಯಿದುವೆ ಎನಗೆ ಏತರ ದುರ್ವಿಧಿಯೊ ತಿಳಿಯೆ
ನೀತಿ ನಿಯಮ ನೀರ ಪಾಲಿಗೆ–ನೋಡಿದ ಜನ
ಪ್ರಾತಕಾಯ್ತು ಗುಟ್ಟು ರಟ್ಟಿಗೆ ॥ ೧೭ ॥

ಸುಲಭದಿ ಪರಿಹರಿಪುದಲ್ಲ ಬಲಿತ ಬೇರು ಕೀಳಸಲ್ಲ
ನೆಳಲನೀವ ಮರವಿದಾಗದೆ–ನೆಗ್ಗಿಲು ಆಯ್ತು
ತುಳಿಯಲೀಗ ಮುಳ್ಳು ಬೆಳೆದಿದೆ ॥ ೧೮ ॥

ಹೆತ್ತವರ ಹೊತ್ತವರ ನಿತ್ಯ ಸೇವೆ ಮಾಡಿ ನಲಿ
ಯುತ್ತ ಮನದಿ ಭಜಿಸಿ ದೈವವ–ದಿನ ಕಳೆಯದೆ
ಚಿತ್ತ ಕಳೆಯಿತೆನ್ನ ಸ್ವಾಸ್ಥ್ಯವ ॥ ೧೯ ॥

ತರಳರನು ಮಂಕುಬಡಿಸಿ ಪರಮ ನೀಚ ಮಾತುಗಳಾಡಿ
ಹಿರಿಯತನದ ಗರ್ವ ತೋರುತ–ಸನ್ಮಾರ್ಗದಿಂದ
ಸರಿಯುವಂತೆ ದೂರ ಮಾಡುತ ॥ ೨೦ ॥

ಕರುಳ ಪ್ರೀತಿ ತೋರಿಕೆಯು ಕರುಳ ಬಗೆವ ರೀತಿಯಾಗೆ
ಹಿರಿಯತನವೆಲ್ಲಿ ಉಳಿವುದು ?–ಆ ಗರುವತನ
ಹರಿಯುತೆಂದೊ ಮಾಯವಾದುದು ! ॥ ೨೧ ॥

ಹುಟ್ಟು ಬಣ್ಣವಿಲ್ಲದಿರೆ ಕಟ್ಟು ಬಣ್ಣ ಮಾನ ತಹುದೆ ?
ಕಟ್ಟು ಸಡಲುವ ವೇಳೆಗೆ–ಈ ಪರಿ ನಾಟ್ಯ
ಅಟ್ಟಹಾಸ ಬರ್ಪವೆಲ್ಲಿಗೆ ? ॥ ೨೨ ॥

ಚಾಡಿ ಮಾತು ಕೇಳಿ ನಾನು ಹೇಡಿಯಂತೆ ವರ್ತಿಸಿದೆ !
ಗಾಡಿಕಾರನಂತೆ ಹೊರಗೆ–ತೋರುತ ಬಾಳ
ಗಾಡಿ ನಡೆಸೆ ಕೆಡೆದೆ ಕಡೆಗೆ ॥ ೨೩ ॥

ಕೆಟ್ಟು ನಿಂತ ಮೇಲೆ ರಥ ನೆಟ್ಟು ನೇರ ನಿಲಿಸಲಳವೆ ?
ಸೊಟ್ಟನೆಲ್ಲ ಮೊದಲೆ ತಿದ್ದದೆ–ಬಾಯ್‌ಬಿಡಲು ಕೊನೆಗೆ
ಬಟ್ಟೆಯು ಸಾಗಲು ಬರುವುದೆ ? ‖ ೨೪ ‖

ಬಾಳಿನ ಲೋಕದ ಪರಿಯು ಗೋಳ ನೋಡಿ ನೋಡಿ ದುಃಖ
ತಾಳದೆ ಪೇಳಿದ ವಚನವು–ರಘುವರನೆನ್ನ
ನಾಲಗೆಯೊಳು ನುಡಿಸೆ ಬಂದವು ‖ ೨೫ ‖

# ನಲವತ್ತೆರಡನೆಯ ಸಂಧಿ

## ಸದ್ವರ್ತನೆ–ಸದಾಚಾರ

ಕಾರಣಂಗಳೇನೇ ಇರಲಿ ಸಾರಸಾಕ್ಷನ ಸ್ಮರಣೆ ಮನಕೆ
ತಾರದಿರುವಂಥ ಮನುಜರು–ಧರಣಿಗೆ ಬಲು
ಭಾರರೆನ್ನಿಸರೆ ನೀಚರು ! ॥ ೧ ॥

ಹೆಂಡಿರು ಮಕ್ಕಳು ಬೇಕು ಉಂಡುಟ್ಟು ಸುಖಪಡಲು ಬೇಕು
ಪುಂಡರೀಕಾಕ್ಷನ ಭಜನೆಯು–ಬೇಡವೆನ್ನುವ
ಭಂಡನಲ್ತೆ ಭ್ರಷ್ಟ ಜೀವಿಯು ॥ ೨ ॥

ತನುವ ಕೊಟ್ಟ ತಾಯಿ ತಂದೆ ಮನಕೆ ಬೆಳಕ ತೋರ್ದ ಗುರು
ಅನುನಯದಿ ಹಿತವ ಕೋರುವ–ಹಿರಿಯರ ಕಡೆ
ಗಣಿಸುವವ ಪಾಪಿಯೆನಿಸುವ ॥ ೩ ॥

ಪದುಮೋದರನ ದಿವ್ಯ ಚರಿತೆ ಪದುಮಿನೀವಲ್ಲಭನ ಭಜನೆ
ಪದುಮಾಕ್ಷನದ್ಭುತ ಮಹಿಮೆ–ತಿಳಿಯದ ನರ
ಬದುಕಿದ್ದರದೇನು ಹಿರಿಮೆ ? ॥ ೪ ॥

ಹಗಲು ಇರುಳು ಹರಿಯ ನಾಮ ಮೊಗದೊಳಿರ್ಪುದಾವ ನರಗೆ
ಬಗೆಯನವನು ಭವದ ಕಷ್ಟವ–ಕಾರಣವುಂಟು
ನಗಧರನೇ ಅವನ ಸಲಹುವ ॥ ೫ ॥

ಹೃದಯ ತುಂಬಿ ಬರುವ ಭಾವ–ಮೃದು ಮಧುರ ವಾಕ್ಯಗಳು
ವದನ ಕೃತಿಯೊಳಿರ್ಪವಾರಿಗೆ–ಅವರೇ ಪರಮ
ಸದಯ ಮಹನೀಯರಿಳೆಗೆ ॥ ೬ ॥

ತಪ್ಪು ಯೋಚನೆಗಳ ಬಿಟ್ಟು ತಪ್ಪು ತಿಳಿಯುವುದನು ಬಿಟ್ಟು
ತಪ್ಪು ಕೆಲಸವೆಂದೂ ಮಾಡದೆ–ಇದ್ದರೆ ಅವರ
ನೊಪ್ಪದಿರನೆ ಶ್ರೀಶ ಹರುಷದೆ ॥ ೭ ॥

ಸ್ವಾಮಿ ರಾಮನಂಘ್ರಿ ಭಜಿಪ–ನೇಮ ನಿಷ್ಠೆಯಿರಲಾಗಿ
ಪಾಮರನಾದರೂ ಅವನು–ಸತ್ಯದಿ ತನ್ನ
ಕಾಮಿತಂಗಳೆಲ್ಲ ಪಡೆವನು ॥ ೮ ॥

ಕರುಣಾವಾರಿಧಿಯು ನಮ್ಮ ಧರಣಿಜಾಮನೋಹರನು
ಪರಿಹರಿಸುತಿಹನು ಪಾಪವ–ತನ್ನ ಭಕ್ತರು
ಕೊರಗದಂತೆ ಪೊರೆವ ಮಾಧವ ॥ ೯ ॥

ದಿನಕೊಮ್ಮೆಯಾದರು ಅವನ ವನಜ ಪಾದಂಗಳ ಸ್ಮರಿಸಿ
ಮನದ ಭಕ್ತಿಯಿಂದ ಬದುಕನು–ತೂಗಿಸುವ ನರರ
ವನಜನಯನ ಕೈಯ ಬಿಡನು ॥ ೧೦ ॥

ವದನದಲ್ಲಿ ಹರಿಯ ನಾಮ–ಹೃದಯದಲ್ಲಿ ಹರಿಯ ಮೂರ್ತಿ
ಪದುಮಜನಯ್ಯನ ನಂಬಿದ–ಸಜ್ಜನತಿರಗೆ
ಒದಗುವುದು ಸೌಖ್ಯ ಸರ್ವದ ॥ ೧೧ ॥

ಗರುಡ ಕಂಡ ಸರ್ಪದಂತೆ ಹರಿಯ ಸ್ಮರಣೆ ಮಾಡಿದವನ
ಪರಿಪರಿಯಾಸುರೀಭಾವವು–ತಲೆಯೆತ್ತದಂತೆ
ಕೊರಗಿ ಕರಗಿ ನಶಿಸಿಪೋಪವು ! ॥ ೧೨ ॥

ಸರ್ಪಶಯನನ ನಾಮ ದರ್ಪದಿ ಬಚ್ಚಿಟ್ಟು ಭಕ್ತಿ
ಯರ್ಪಣೆಯ ಮಾಳ್ಪ ಜೀವಿಗೆ–ಇಹಪರ ಸೌಖ್ಯ
ತಪ್ಪದೆ ಬರ್ಪುದು ಆತಗೆ ॥ ೧೩ ॥

ನಿತ್ಯ ಸನಾತನ ಧರ್ಮ ಸತ್ಯ ದಯೆ ಶಾಂತಿ ಸ್ನೇಹ
ಕರ್ತವ್ಯ ಕಾಲದ ನಿಷ್ಠೆಯು–ಗುರು ಹಿರಿಯರೊ
ಳತ್ಯಧಿಕ ಪ್ರೀತಿ ಶ್ರದ್ಧೆಯು ॥ ೧೪ ॥

ಸ್ವಾಮಿ ಸೇವಕನ ಭಾವ ಕಾಮಿತಾರ್ಥದಾಯಕವು
ನೇಮ ನೀತಿಯರಿತು ನಡೆವಗೆ–ಸರ್ವೇಶನೀವ
ನಾಮ ಧ್ಯಾನ ಭಾಗ್ಯವಾತಗೆ ॥ ೧೫ ॥

ಕರುಣಾಂತರಂಗನು ತನ್ನ ಪರಮ ಭಕ್ತಿಯಿಂದ ನೆನೆವ
ನರರಿಗೆಂದೂ ತನ್ನನೀವನು–ಇಹದಲ್ಲಿ ಸೌಖ್ಯ
ಪರದಲ್ಲಿ ಸದ್ಗತಿ ಕೊಡುವನು ॥ ೧೬ ॥

ಕೋಮಲ ಮನದಿ ಮೇಘ ಶ್ಯಾಮಲ ವರ್ಣನ ನಿಲಿಸಿ
ನೇಮದಿಂದ ಭಜಿಪ ಜೀವಿಗೆ–ಕಷ್ಟಗಳುಂಟೆ
ಸ್ವಾಮಿ ಕೃಪೆಯಪಾರವಾತಗೆ ॥ ೧೭ ॥

# ನಲವತ್ತೊಮ್ಬರನೆಯ ಸಂಧಿ

## (೧) ನಿನ್ನ ನೀನು ತಿದ್ದಿಕೊ !

ಹುಟ್ಟಿದಂದು ಮೊದಲಾಗಿ ಕಷ್ಟಪಟ್ಟಿದೆಲ್ಲ ನೆನೆದು
ಭ್ರಷ್ಟ ಜೀವನವ ನಡೆಸದ–ಜಾಣನೆನಿಸಿ
ಶಿಷ್ಟರೊಡನೆ ಬಾಳಬಾರದೆ ? ॥ ೧ ॥

ಮನಕೆ ಸುಳಿವ ನಾನಾ ಚಿಂತೆ ತನುವನಾವರಿಸಿರುವ ಚಿಂತೆ
ದಿನ ದಿನಕೆ ಬೆಳೆವ ಚಿಂತೆಯ–ದೂರಕೆ ತಳ್ಳಿ
ವನಜನಾಭನನ್ನು ಸ್ಮರಿಸೆಯ ? ॥ ೨ ॥

ಬಾಳುವ ದಿನದಲ್ಲಿ ನೀನು ಹೂಳಿಟ್ಟಿದ್ದೂ ಬರುವುದಿಲ್ಲ
ಧೂಳಾಗುವ ಮೊದಲೇ ಈ ದೇಹ–ಎಚ್ಚರ ವಹಿಸಿ
ನೀಲವರ್ಣನಲ್ಲಿಡು ಮೋಹ ॥ ೩ ॥

ಏನು ಮಾಡಿದರು ನೀನು ಮಾನವಿಲ್ಲದಾಯ್ತು ಬದುಕು
ಹಾನಿಗಾಯ್ತು ದಾರಿಯಲ್ಲದೆ–ಇನ್ನಾವ ಪುಣ್ಯ
ದಾನ ಧರ್ಮ ಕೃತಿಯ ಮಾಡಿದೆ ? ॥ ೪ ॥

ಕಿರಿಯರನ್ನು ನಡೆಸಲಿಲ್ಲ ಹಿರಿಯರ ಗೌರವಿಸಲಿಲ್ಲ
ಹರಿ ಗುರುಗಳ ಭಕ್ತಿಯೆಲ್ಲವು–ನೀ ಮಾಡಿದುದು
ಪರಮ ಡಾಂಭಿಕವೆನಿಸಿತಲ್ಲವು ॥ ೫ ॥

ಸಜ್ಜನರ ನೋಗು ಹಾಕಿ ದೌರ್ಜನ್ಯದ ಬುದ್ಧಿ ಸೋಕಿ
ಮಾರ್ಜಾಲ ತಪವ ಮಾಡಿರೆ–ಪರಮಾತ್ಮ ನಿನ್ನೀ
ಕಜ್ಜಕೊಪ್ಪುವನೇನೊ ಹೀಗಿರೆ ! ॥ ೬ ॥

ಹೊಣೆಯ ಹೊತ್ತು ಸಂಸಾರದಿ ಗುಣದೋಷವ ಲೆಕ್ಕಿಸದೆ
ಮನಕೆ ಬಂದ ರೀತಿಯಿದ್ದರೆ–ಸುತ್ತಿನ ನಿನ್ನ
ಜನರು ಮಾನವಂತನೆಂಬರೆ ? ॥ ೭ ॥

ಇಲ್ಲಿ ದಾನ ಧರ್ಮ ಮಾಡಬಲ್ಲ ಪುಣ್ಯ ಜೀವಿ ಪರ
ದಲ್ಲಿ ಸುಖಿಸಬಲ್ಲನಲ್ಲದೆ–ಕೇಳ್ವರಾರಲ್ಲ ?
ಖುಲ್ಲರಿಗೆ ಸ್ಥಾನವೆಲ್ಲಿದ ? ॥ ೮ ॥

## (೨) ನಿನ್ನ ಲೆಕ್ಕ ಅಲ್ಲಿದೆ

ವರದಿಯೊಪ್ಪಿಸಲು ಬೇಕು ಪರಲೋಕದೊಳಗೆ ನೀನು
ಧರಣಿಯೊಳು ಗೈದ ಪರಿಪರಿ–ಕಾರ್ಯಗಳ ಹೇಳ
ನರಕ ನಾಕಗಳಿಗೆ ನೀ ಸರಿ ॥ ೯ ॥

ನಿನ್ನ ಇಲ್ಲಿನ ವ್ಯವಹಾರ ನಿನ್ನ ದೈನಂದಿನದ ಚರ್ಯೆ
ನಿನ್ನ ಸುಳ್ಳು ಜೊಳ್ಳು ಕತೆಗಳ–ಲೆಕ್ಕವಲ್ಲುಂಟು !
ನಿನ್ನ ಸುಕೃತ ದುಷ್ಕೃತಗಳ ॥ ೧೦ ॥

ಆಡಿದಾಟವೆನ್ನಬೇಡ ! ನೋಡರಾರೂ ಎನ್ನಬೇಡ
ರೂಢಿಗೊಡೆಯನೊಬ್ಬನಿರುವನೊ ! ನಿನ್ನಂತೆ ಆವನು
ಹೇಡಿಯಲ್ಲ ! ನೋಡಿ ನಗುವನೊ ॥ ೧೧ ॥

ಕಾಣನವನು ನನಗೆ ನಿನಗೆ ಕಾಣುವನು ನನ್ನ ನಿನ್ನ
ಕಾಣಲಾರಗುದನು ಕಾಣುವ !–ಕಣ್ಣುಂಟು ಅವಗೆ
ಕಾಣಬಯಸುವರಿಗೆ ಕಾಣುವ ॥ ೧೨ ॥

## (೩) ನಿನ್ನೊಳಗೇ ದೇವನಿದ್ದಾನೆ

ಒಳಗೆ ಇದ್ದು ನುಡಿವನವನು ಒಳಗೆ ಇದ್ದು ನೋಡುತಿಹನು
ಒಳಿತು ಕೆಡುಕು ಯಾವುದೆನ್ನುವ–ಜಿಜ್ಞಾಸುಗಳಿಗೆ
ಗಳಿಗೆ ಕ್ಷಣಕೆ ಬೆಳಕು ತೋರುವ ॥ ೧೩ ॥

ಅಂತರ್ಯಾಮಿಯೆನಿಸಿ ನಿನ್ನ ಅಂತರಂಗವನು ತಿಳಿದು
ಇಂತಿಂಥ ಕರ್ಮಗಳ ಮಾಡೆಂದು–ಪ್ರೇರಿಸುವ ನಿನ್ನ
ಅಂತಸ್ಥವರಿಯುತಲೆಂದಂದು ॥ ೧೪ ॥

ಮನವನೆಲ್ಲು ಹರಿಯಬಿಡಗ ತನು ಸ್ವಾಧೀನವಿದ್ದರಾಗ
ನೆನೆದುದೆಲ್ಲ ನಡೆವುದು ಕಾಣೊ !–ತಪ್ಪಿದರಿ ದಾರಿ
ನೆನೆದುದೆಲ್ಲ ಕೆಡುವುದು ಕಾಣೊ ! ॥ ೧೫ ॥

ತಿಳಿಯಾಗಿಪ್ಪ ಮನದವರಿಗೆ ತಿಳಿಯುವಂತೆ ತಿಳಿಸುವನು
ಕೊಳಕು ಮನದವರಿಗೆ ತಿಳಿಸನು !–ಗರ್ವದಿಂದವರು
ಕೊಳೆತು ನಾರುವಂತೆ ಬಿಡುವನು ॥ ೧೬ ॥

ನಾವು ಕೇಳಿ ಬಂದ ಫಲ ನಾವು ಮಾಡಿಯುಂಬ ಫಲ
ನಾವು ಬಯಸಿ ಮಾಳ್ಪ ಕರ್ಮಕೆ–ಅವನಡ್ಡಿ ಬರನು
ನಾವು ಕರೆಯೆ ಬರುವ ಕ್ಷಣಕೆ ॥ ೧೭ ॥

ನಾವು ಮರೆಯೆ ಸುಮ್ಮನಿರುವ ನಾವು ಮೆರೆಯೆ ಸುಮ್ಮನಿರುವ
ನಾವು ಮೊರೆಯೆ ಸುಮ್ಮನಿರುವನು–ಮೊರೆಹೊಕ್ಕ ಮಾತ್ರಕೆ
ನಾವು ಬೇಡಿದುದನು ಕೊಡುವನು ॥ ೧೮ ॥

ಬಂದ ಕಷ್ಟ ಮಾಯವಾಯಿತೆಂದರದು ದೈವ ಕೃಪೆಯು
ಬಂಧನ ಬವಣೆಗಳಿಲ್ಲವು–ಕ್ಷಣದಿ ಗಾಳಿ
ಮುಂದಿನ ದೀಪದೊಲು ಮಾಯವು ॥ ೧೯ ॥

ದೇವ ಯೋಗ್ಯ ನಡತೆಯಿಂದ ದೇವತಾ ಭಾವನೆಗಳಿಂದ
ದೇವ ರಘುವರನ ಪಾದವ–ಸದ್ಭಕ್ತಿಯಿಂದ
ಸೇವಿಸಿ ಸುಖಿಸೊ ಮಾನವ ॥ ೨೦ ॥

# ನಲವತ್ನಾಲ್ಕನೆಯ ಸಂಧಿ

## ರಾಮ ರಾಜ್ಯ

ಭಾರತಮಾತೆಯು ಕುಜನ ಭಾರದಿಂದ ಕುಗ್ಗಲಾಗಿ
ಘೋರ ಕ್ಷಾಮವಾವರಿಸಿತು !–ಸತ್ಯ ಧರ್ಮಗಳ
ದಾರಿ ಬಿಟ್ಟು ದೂರ ಸರಿಯಿತು ! ॥ ೧ ॥

ಇದ್ದಕಿದ್ದ ಹಾಗೆ ಜನರ ಬುದ್ಧಿಯು ಬದಲಾಯಿಸಿತು !
ಯುದ್ಧ ಮುಗಿದು ನಮ್ಮ ದೇಶಕೆ–ಸ್ವಾತಂತ್ರ್ಯ ಬರಲು
ಬಿದ್ದರು ಹಲವರು ಸ್ವಾರ್ಥಕೆ ॥ ೨ ॥

ಶ್ರೀಮಂತ ವರ್ಗದ ಕೆಲರು ತಾಮಸಾಧಿಕಾರಿಗಳು
ಸೀಮೆಯ ಪ್ರಜೆಗಳ ಕ್ಷೇಮವ–ಲಕ್ಷಿಸದೆ ಧರ್ಮ
ಸೀಮೆ ಮರೆತು ಮೀರಿ ನೇಮವ ॥ ೩ ॥

ಬಡಬಗ್ಗರೆನ್ನದೆ ದೇಶ ಬಡತನದಿ ಬಳಲುವುದ ನೋಡ
ದೊಡನೊಡನೆ ದವಸ ಧಾನ್ಯವ–ಬಚ್ಚಿಟ್ಟು ಲಾಭ
ಬಡುಕರಾದರಕಟ ! ಮಾಧವ ॥ ೪ ॥

ದೊಡ್ಡವರು ಬೇಡವೆಂದು ಬುದ್ಧಿ ಹೇಳಿದರೂ ಇವರ
ಅಡ್ಡದಾರಿ ತಪ್ಪಲೇ ಇಲ್ಲ–ಬಡ ಪ್ರಜೆಗಳ
ಗುಡ್ಡೆ ಕಣ್ಣು ಹೊಳಪಾಗಲಿಲ್ಲ ! ॥ ೫ ॥

ಕಳವು ಕೊಲೆ ಲೂಟಿ ಕದನ ಸುಲಿಗೆ ಮೋಸ ಸುಳ್ಳು ಕ್ರೌರ್ಯ
ವಿಳೆಯು ಮೇಲೆ ಹೆಚ್ಚುತಲಿಂದು–ದೀನ ದರಿದ್ರ
ರುಳಿವೆ ಕಷ್ಟವಾಗಿರ್ಪುದಿಂದು ॥ ೬ ॥

ರಾಮ ರಾಜ್ಯ ಗೈವೆವೆಂದು ಸೀಮೆಯೊಳಗೆ ಸಾರುತಿಂದು
ಕಾಮ ಕ್ರೋಧಗಳಿಗೆ ಸಿಲುಕಿದೆ !–ಮಾನವ ಕುಲ
ಕಾಮ ರಾಜ್ಯದೊಳಗೆ ಮೆರೆದಿದೆ ! ॥ ೭ ॥

ಗಾಂಧಿ ನೆಹರು ಪರಮಹಂಸರಿಂದ ಮಾತು ನಡೆಸಲಿಲ್ಲ
ಸಂದೇಶ ಗಾಳಿಗೆ ಹಾರಿತು !–ಆಳುವ ಜನರ
ಸಂದೇಹ ರಾಜ್ಯವ ಕೆಡಿಸಿತು ! ॥ ೮ ॥

ಭಾರತೀಯ ಪೌರರಿಂಗಪಾರ ಹಕ್ಕು ಹೋಣೆಗಳೆಂದು
ಸಾರುತ ಬೊಕ್ಕಸದ ದ್ರವ್ಯವ–ಹೊಡೆದರು ಸೂರೆ
ಹೀರುತ ಬಡವರ ರಕ್ತವ ! ॥ ೯ ॥

ಸಾಲಸೋಲದಲ್ಲಿ ಮುಳುಗಿ ಹಾಳುಬೀಳುತಿಹುದು ದೇಶ
ವಾಳುತಿರೆ ಪ್ರಜೆಗಳನಿಂತು–ಬತ್ತಲೆ ನಿಲಿಸಿ
ಪೇಳ್ವುದು ನಾವಿನ್ನೇನು ಬಂತು ? ॥ ೧೦ ॥

ಸಾಲದಿಂದ ಬಡವರುಳಿದು ಸಾಳೆಗೆಂತು ಎನ್ನುತಿರೆ
ಶೀಲವಂತರಂತೆ ನಟಿಸುತ–ದೇಶದ ಜನರ
ಪಾಲಿಪೆವೆಂದಭಯ ಬೀರುತ ॥ ೧೧ ॥

ಶಾಸಕರೆನಿಸಿ ತಾವೇ ಶಾಸನವ ಮೀರುವಂಥಾ
ದೇಶವಾಳ್ವ ಜನರು ಬಂದರು !–ಅರಿಯದ ಜನರ
ನಾಶಕೆ ಕಾರಣರಾದರು ! ॥ ೧೨ ॥

ಕ್ರೂರ ಮನಸ್ತಾಪಗಳು ಮಾರಕಾಸ್ತ್ರ ತಾಪಗಳು
ಘೋರ ಸಮರ ರಕ್ತಪಾತವು–ಪ್ರಜೆಗಳ ಸಾವು
ಮೀರಿ ಬಂತು ವೀರಕ್ಷಾಮವು ! ॥ ೧೩ ॥

ದೇಶವನಾಳುವೆವೆಂದು ಭಾಷಣವ ಬಿಗಿದು ಜನರ
ಶೋಷಣೆ ಗೈಯುತಲಿಹರೊ–ದೇಶದ ಸರ್ವ
ನಾಶವನ್ನು ಗಣಿಸದಿಹರೊ ! ॥ ೧೪ ॥

ಮಾತಿನೊಳು ಜೇನು ಸುರಿಸಿ–ಸೋಶವರಂತೆಯೆ ನಟಿಸಿ
ಘಾತುಕತನದ ಕೆಲಸವ–ಮಾಡುತಲಿಹರು
ನೀತಿ ನಿಯಮ ಮೀರಿ ಕೇಶವ ! ॥ ೧೫ ॥

ಮಣ್ಣಿನ ದೇಹದ ನರರು ಬಣ್ಣ ಬಣ್ಣ ದಾಟವಾಡಿ
ಮಣ್ಣುಗೂಡಿಸುತಲಿ ದೇಶವ–ಪ್ರಜೆಗಳ ಸೌಖ್ಯ
ಮಣ್ಣುವಾಲಾಯಿತೊ ಮಾಧವ ! || ೧೬ ||

ಬಡತನದಿ ಭಂಗಪಡುತ ಒಡಲ ಪೋಷಿಸಲು ಬವಣೆ
ಪಡುವ ವಿವಿಧ ಹೀನ ವೃತ್ತಿಯ–ವಿಧಿಯಿಲ್ಲದೆ ಹಿಡಿದು
ಪಡೆಯದಿಹರೊ ದೇವ ! ತೃಪ್ತಿಯ || ೧೭ ||

ದೊಡ್ಡವರ ಹೆಸರಿನಲ್ಲಿ ದಡ್ಡರೆಲ್ಲ ತಮ್ಮ ತಲೆಯ
ನೊಡ್ಡಿ ನಂಬಿ ಕೆಟ್ಟ ಜನಗಳ–ತಾವೂ ಕೆಟ್ಟಿಹರು
ಹೆಡ್ಡರಾಗಿ ಕಳೆದು ದಿನಗಳ || ೧೮ ||

ಉದರ ಪೋಷಣೆಯ ಕಷ್ಟವೆದುರಿಸಲಾರದೆ ಕೆಲರು
ವಿಧವಿಧದೊಳಾತ್ಮಹತ್ಯೆಯ–ಮಾಡಿಕೊಳುತಿಹರು
ಬದುಕಲು ಕಾಣದೆ ದಾರಿಯ || ೧೯ ||

ಎಲ್ಲಿ ನೋಡಲಪಘಾತವೆಲ್ಲಿ ನೋಡಲಪಹರಣ
ಎಲ್ಲಿ ನೋಡೆ ವಿಷದ ಸೇವನೆ–ಮಾನವ ಬದುಕ
ಲಿಲ್ಲವೆಂದು ಸದ್ವಿವೇಚನೆ ! || ೨೦ ||

ನೊಂದು ಬೆಂದ ಹೃದಯದಿಂದ ಬಂದ ಮಾತು ಕೇಳಿರಿದನು
ಸಂಕೋಚವೇತಕೆ ಸತ್ಯದ–ಸಂಗತಿ ನಿಮ್ಮ
ಮುಂದಿಡುತಲಿರ್ಪೆನು ದುಃಖದ || ೨೧ ||

ನಾರುವ ಶರೀರದಲ್ಲಿ ಮೀರಿ ಮಮತೆಯಿಟ್ಟು ಧರ್ಮ
ದಾರಿ ಬಿಟ್ಟು ನಡೆಯಲೇನಿದೆ ?–ಪುಣ್ಯದ ಗಳಿಸೆ
ಮಾರಪಿತನ ಸ್ಮರಿಸಬಾರದೆ ? || ೨೨ ||

ತಿಳಿಯಾದ ಭಾವನೆಗಳು ಹೊಳೆದಂತೆಲ್ಲವಾಗಾಗಲೆ
ತಿಳಿಸಿರುವೆ ಯಾಲಪದದೊಳು–ಎನ್ನಯ ಮನದಿ
ತಿಳಿಸಿದಂತೆ ಹರಿ ಗುರುಗಳು || ೨೩ ||

ಹುಟ್ಟಿದಮೇಲೆಂದಾದರೂ ಗಟ್ಟಿಮುಟ್ಟಾಗಿರುವ ದಿನದಿ
ಗುಟ್ಟಾಗಿ ಪರಮಾತ್ಮನಂಘ್ರಿಯ–ಭಜಿಸಲು ಬೇಕೊ !
ಶಿಷ್ಟಾಚಾರವಿದ ನೀನರಿಯೆಯ ! || ೩೪ ||

ಮಕ್ಕಳ ಮನಸ್ಸಿನಂತೆ ದುಃಖದೂರನಾಗು ನಿನಗೆ
ಚಿಕ್ಕ ಬುದ್ಧಿ ಬೇಡವೆಂದಿಗೂ–ಪರಹಿತವನೆಣಿಸಿ
ಚೊಕ್ಕ ಬಾಳ್ವೆ ನಡೆಸೊ ಎಂದಿಗು || ೩೫ ||

ಹೇಳಿ ಕೇಳಿ ನಡೆಯುವರಿಗೆ ಶೀಲವಂತರೆನಿಸಿದರಿಗೆ ದ
ಯಾಳುವಾದವರಿಗೆ ಲೋಕವೇ–ತಲೆ ಬಾಗುವುದು
ಬಾಳೆಲ್ಲಾ ಬಂಗಾರವವರಿಗೆ || ೩೬ ||

ಯಾವ ವಿದ್ಯೆ ಕಲಿತರೂ ನೀ ಜೀವನವ ನಡೆಸುವಲ್ಲಿ
ನೋವು ಪರರಿಗಾಗದಂತಿರೆ–ನಡೆದರೆ ನಿನ್ನ
ಜೀವನ ಮೆಚ್ಚುವುದೀ ಧರೆ || ೩೭ ||

# ನಲವತ್ತೈದನೆಯ ಸಂಧಿ

## (೧) ಮಾನವಂತನಾಗಿ ಬಾಳು

ಮಾನವಂತನವನೆ ನಿಜ ಮಾನವನು ಜಗದಿ ಪರರ
ಮಾನಿನಿಗೆ ಧನಕೆ ಧರಣಿಗೆ–ಆಶಿಸದವನು
ಜ್ಞಾನಿಯೆನಿಸುವನು ಕಡೆಗೆ || ೧ ||

ಅವನಿಗಾವ ಕಷ್ಟವಿರದು ಅವನಿಗೆಲ್ಲರಿಷ್ಟರಹರು
ಅವನದೇ ಆದರ್ಶ ಜೀವನ–ಅವನಂತೆ ನಡೆಯು
ವವರ ಬದುಕೇ ಪರಮ ಪಾವನ || ೨ ||

ನಿನ್ನ ನಿನ್ನ ನಂಬಿಕೆಗಳನನ್ಯರ ದುರ್ಬೋಧೆಯಿಂದ
ಮಣ್ಣುಗೂಡಿಸಬಾರದೆಂದಿಗೂ–ಮೂಢನಂಬಿಕೆಗ
ಳೆನ್ನು ದೂರಕಟ್ಟುವುದೆಂದಿಗೂ || ೩ ||

ನಿನ್ನೊಳಗೆ ತಿಳಿದು ನೋಡು ಅನ್ಯರನೇಕಾಶ್ರೈಸುವೆ ?
ನಿನ್ನ ನಿನ್ನುದ್ಧಾರ ಮಾರ್ಗವ–ತಿಳಿದೊಡೆ ಸಾಕು
ಚೆನ್ನಾಗಿ ಬದುಕುವೆ ಮಾನವ || ೪ ||

ತಲೆಯೊಳಗೆ ಯೋಚಿಸು ನೀ ನಲವಿನ ಮನದಿ ನಿನ್ನ
ಗೆಲುವಿಗಾವ ದಾರಿ ಸರಿಯೆಂದು–ಪರ ಹಿಂಸೆಯಿರದ
ಚೆಲುವ ನಡೆಯು ನುಡಿಯು ಹೀಗೆಂದು || ೫ ||

ಹಲವನು ಹಂಬಲಿಸದಿರು ನಲಿವು ನೋವು ಬೆಲ್ಲ ಬೇವು
ಮೆಲಲೇ ಬೇಕು ಯಾರೇ ಆದರೂ–ಬಾಳಿನಲಿ ಸಮತೆ
ನಿಲಲು ಜಯಿಪೆ ಯಾರನ್ನಾದರೂ || ೬ ||

ಅಸಮಾಧಾನವಸಮ ಚಿತ್ತ ವಿಷಯಾಸಕ್ತಿ ದುರಹಂಕಾರ
ವಿಷಮ ವಿಕೃತ ಕರ್ಮಗಳಿಂದ–ಸರ್ವವು ನಾಶ
ಕುಸಿದು ಬೀಳ್ವೆ ಜೋಕೆ ! ಕೇಳಿದ || ೭ ||

ಹಲವು ಜನುಮ ಜನುಮದಲ್ಲು–ತಿಳಿಯುವುದಿರ್ಪುದು ನಿನಗೆ
ತಿಳಿದೆನೆಂದು ನೀನು ಗರ್ವಿಸೆ–ಗುರಿ ತಪ್ಪುವುದೊ
ತಿಳಿದು ನಡೆಯೆ ಜಯವು ನಿನಗೈಸೆ || ೮ ||

ಸಾಕ್ಷಿಯಿಟ್ಟು ಕೆಲಸ ಮಾಡು ಸಾಕ್ಷಿಯ ತೆಗಳಲು ಬೇಡ
ಸಾಕ್ಷಿಯೇಕೆನ್ನಲು ಬೇಡವೊ–ನಿನ್ನಯ ಚಿತ್ತ
ಸಾಕ್ಷಿಯ ಮೀರಲು ಬೇಡವೊ || ೯ ||

ನಮ್ಮ ನಮ್ಮ ಹೃದಯ ಸಾಕ್ಷಿ ನಮ್ಮನೆಚ್ಚರಿಸುತಿಹುದು
ಹಮ್ಮು ಸಲ್ಲದೆಂದು ಬೋಧಿಸಿ–ಸನ್ಮಾರ್ಗದಲಿ
ಸುಮ್ಮನೆ ನಡೆಯೆಂದು ಸೂಚಿಸಿ || ೧೦ ||

ಇದರಂತೆ ನಡೆವುದೇ ಹಿತವು ಇದುವೆಯಂತಃಸಾಕ್ಷಿ ನಮ್ಮ
ಹೃದಯಾಂತರಾಳದ ಬೋಧೆಯು–ಇದೆ ದೈವವಾಣಿ !
ಪದುಳದಿ ಬಾಳ್ವರ ದಿಕ್ಸೂಚಿಯು || ೧೧ ||

## (೨) ಎಲ್ಲರೂ ಟೀಕಿಸುವವರೇ !

ಇಂದಿನ ಕಾಲದಿ ನಮ್ಮ ಹಿಂದಿನ ಹಿರಿಯರನೆಲ್ಲ
ಹಿಂದೂ ಮುಂದಿಲ್ಲದೆ ಟೀಕಿಪ–ಚಾಳಿಯು ಕಿರಿಯ
ಮಂದಿಗೆ ಬಂದಿಹುದು ಕೇಳಪ್ಪ ! || ೧೨ ||

ಲೋಕಹಿತಕೆ ದುಡಿದವರು ಲೋಕದೇಳ್ಗೆ ಬಯಸಿದವರು
ಲೋಕೋತ್ತರ ಶೀಲವಂತರು–ಸಾಧು ಸಂತರು
ಬೇಕಾಬಿಟ್ಟಿಯೆಂದು ಬೈವರು || ೧೩ ||

ಗುರುಗಳನಾಡಿಕೊಂಬರು ಕವಿಗಳನೇಡಿಸುವರು
ಪರಮ ಶ್ರೇಷ್ಠ ಕೃತಿಯ ಜರಿವರು !–ದೇವರನು ಹಳಿವ
ಹರುಕು ಮತಿಗಳೇ ಹೆಚ್ಚಿದರು ! || ೧೪ ||

ದೊಡ್ಡವರನಳಿಯುವರು ಅಡ್ಡಹಾದಿಗೆಳೆಸಿಪರು
ದಡ್ಡರ ಹಿಂಸಿಸಿ ನಗುವರು !—ಕ್ರೂರ ಕರ್ಮಿಗಳು
ಗಡ್ಡಧಾರಿ ವೇಷ ರಂಜಿತರು ! ॥ ೧೫ ॥

ನಾನೇ ದೇವನೆನ್ನುವರು ನಾನೇ ಗುರುವನೆನ್ನುವರು
ನಾನೇ ಜಗಕೆ ಗುರುವೆನ್ನುವರ—ಸ್ವಾರ್ಥಸಾಧಕರು
ಏನೆಂಬೆ ! ಈ ಜನರೇ ತುಂಬಿಹರು ॥ ೧೬ ॥

ಮೊದಲು ಕೊನೆಯನರಿಯದವರು ತೋರಲು ಮಾತ ಮರುಳರಿವರು
ಮುದದಿ ನುಗ್ಗಿ ತಲೆಯ ಕಲ್ಲಿಗೆ—ಪ್ರಾಣವದಿ ಕೊಡುವ
ಹದಗೆಟ್ಟ ನೀಚರು ಕಡೆಗೆ ॥ ೧೭ ॥

ಬುದ್ಧಿ ಮಾತು ಹೇಳುವವರನೊದ್ದು ಬಿಡುವ ಕಾಲವಿದು
ಕ್ರುದ್ಧ ಜನರಾಟೋಪ ಹೆಚ್ಚಿತು—ಇದನರಿತ ಜಾಣ
ಸದ್ದು ಮಾಡದಿರ್ಪುದೊಳ್ಳಿತು ॥ ೧೮ ॥

ಯಾರಿಗೆ ಯಾರಿಲ್ಲವೆಂಬ ಚಾರು ಬೋಧೆಯಿಂದು ಸತ್ಯ
ಯಾರಿಗೆ ಯಾರೊ ಪುರಂದರ ವಿಠ್ಠಲ—ಎಂಬುವ ಗಾದೆ
ಸಾರವರಿಯದವನೆ ಮುಟ್ಠಾಳ ! ॥ ೧೯ ॥

ಹೇಳುವರಿಲ್ಲೆನಬೇಡ ! ಕೇಳುವರಿಲ್ಲೆನಬೇಡ !
ಹೇಳುವರು ಸರಿಯಾಗಿದ್ದರೆ—ಕೇಳುವರುಂಟು
ಕೇಳಿ ನಡೆಯದವರು ಕೆಡರೆ ? ॥ ೨೦ ॥

ಗುರು ಶಿಷ್ಯ ಸಂಬಂಧವೆಂದೋ ಕಡಿದು ಹೋಯಿತೀ ಕಾಲಕ್ಕೆ
ಗುರುವಿಗೇ ತಿರುಮಂತ್ರ ಹೇಳುವ—ಶಿಷ್ಯರೇ ಬಹಳ !
ಗುರುವಿಗೇ ದ್ರೋಹವ ಬಗೆಯುವ ॥ ೨೧ ॥

## (೩) ಆಶ್ರಮವೊಂದಿರಬೇಕು

ಈ ಶ್ರಮವಾಶ್ರಮಕೆಲ್ಲಾ ಆಶ್ರಮವೊಂದಿರಬೇಕು
ಆಶ್ರಮರಹಿತ ಜೀವನ—ಪಾವನವಲ್ಲದು
ಆಶ್ರಯವಿಲ್ಲದ ಕಾನನ ! ॥ ೨೨ ॥

ಆಶ್ರಮಂಗಳಲ್ಲಿ ಬ್ರಹ್ಮಚರ್ಯ ಸನ್ಯಾಸಂಗಳವು
ಆಶ್ರಯಿಸೆ ಸುಲಭವಲ್ಲವು–ಜಿತೇಂದ್ರಿಯಗೆ
ವಿಶ್ರಮಿಸ ಯೋಗ್ಯವಾದುವು ! ॥ ೨೩ ॥

ಗಾರ್ಹಸ್ಥ್ಯಾಶ್ರಮದಿ ಕೇಳು ತೋರುವುದು ಮನಕೆ ಶಾಂತಿ
ಮೀರದಿರೆ ನೀತಿ ನಿಯಮವ–ಸಜ್ಜನನೆನಿಸಿ
ಸೇರಬಹುದು ಸದ್ಗತಿಯನವ ॥ ೨೪ ॥

ಮಡದಿ ಮಕ್ಕಳೊಡನೆ ಕೂಡಿ ಪಡೆದ ಮಾತಾಪಿತರ ಕೂಡಿ
ನಡೆ ನುಡಿಯಲಿ ಶುದ್ಧನಾಗುತ–ಎಲ್ಲರ ತೋಷ
ಪಡಿಸಲದುವೆ ಪೂರ್ವ ಸುಕೃತ ! ॥ ೨೫ ॥

ಮನೆಗೆ ಬಂದ ಗುರು ಹಿರಿಯರನತಿಥಿ ಅಭ್ಯಾಗತರ ಮುದದಿ
ಮನದ ಭಕ್ತಿ ಗೌರವಗಳಿಂದ–ಆದರಿಸುವಂಥಾ
ಮನುಜಗೆ ಮೆಚ್ಚುವನು ಗೋವಿಂದ ! ॥ ೨೬ ॥

ಕೆರೆಯ ನೀರ ಕೆರೆಗೆ ಚೆಲ್ಲಿ ವರವ ಪಡೆವ ಮಾರ್ಗವಿದು !
ಪರಮೇಶ್ವರನು ತನಗೆ ನೀಡಿದ–ಸಂಪತ್ತುಗಳನೀ
ಪರಿ ಸಮರ್ಪಿಸಲು ಬೇಡಿಗ / ॥ ೨೭ ॥

ಕೊಟ್ಟ ದೇವ ಬಡವನಲ್ಲ ! ಸಿಟ್ಟವನಿಗಾರಲ್ಲು ಇಲ್ಲ
ಕೊಟ್ಟುದನು ಕೆಟ್ಟ ಕಾರ್ಯಕೆ–ತೊಡಗಿಸಲವ
ಸಿಟ್ಟುಗೊಂಬ ನಿನ್ನ ಕೃತ್ಯಕೆ ॥ ೨೮ ॥

ಕೊಟ್ಟ ದೇವ ಕಿತ್ತುಕೊಂಬ ದುಷ್ಟ ಕರ್ಮ ನೀನು ಮಾಡೆ
ಗುಟ್ಟಿದನು ನೀನು ತಿಳಿವುದು–ಕೊಟ್ಟುದ್ದರಲ್ಲಿ
ಶ್ರೇಷ್ಠ ರೀತಿ ವಿನಿಯೋಗಿಪುದು ॥ ೨೯ ॥

ನಿರ್ವಿಕಾರ ಚಿತ್ತದಿಂದ ಸರ್ವಜೀವರೊಳಿತ ಬಯಸಿ
ನಿರ್ವಹಿಸು ನೀನು ಕಾರ್ಯವ–ನಿನ್ನೀ ಸೇವೆಗೆ
ಸರ್ವೇಶ್ವರನು ಮೆಚ್ಚಿ ಸಲಹುವ ॥ ೩೦ ॥

ಮನೆಮಂದಿಯ ಪೋಷಣೆಯು—ದಿನನಿತ್ಯದ ಕಾಯಕವು
ಜನರ ನಾಡು ನುಡಿಯ ಸೇವೆಯು—ದಾನ ಧರ್ಮಗಳು
ಮನುಜನ ಬಾಳುವೆಗೆ ಯೋಗ್ಯವು ॥ ೩೧ ॥

ಸ್ವಾನುಭವ ಜ್ಞಾನವಿಲ್ಲದೇನೂಮಾಡಲಾಗದೆಂದು
ನೀನು ಧಿಕ್ಕರಿಪುದು ಸಲ್ಲದು !—ಹಿರಿಯರ ಮಾತ
ಸಾನುರಾಗದಿಂದ ಕೇಳ್ವುದು ॥ ೩೨ ॥

ಹಲವು ನೀನು ಕೇಳಬೇಕು ಹಲವು ನೀನು ತಿಳಿಯಬೇಕು
ಹಲವನನುಭವಿಸಲೇ ಬೇಕು—ಬಲ್ಲಿದನೆನಿಸಿ
ಹಲವು ಪರರಿಗರುಹಲೇ ಬೇಕು ॥ ೩೩ ॥

ಯಾವ ಕಾರಣಕು ಮನಕೆ ನೋವ ತಂದುಕೊಳ್ಳಬೇಡ
ಯಾವ ಕಾರಣಕು ಭಯ ಬೇಡ—ನಿಶ್ಚಲ ಮನದಿ
ಯಾವುದನೂ ಸಾಧಿಸಬಹುದು ನೋಡಾ ! ॥ ೩೪ ॥

## ನಲವತ್ತಾರನೆಯ ಸಂಧಿ

### (೧) ಪರಮಾತ್ಮನು ಕರುಣಾಸಾಗರ

ಕರುಣವೇ ತುಂಬಿರ್ದ ಜ್ಞಾನ ಕಿರಣವೇ ಪ್ರಕಾಶ ಬೀರಿ
ಧರಣಿಯೆಲ್ಲ ನಲಿಯುತಿರ್ಪುದು–ಭಗವಂತನಿಚ್ಛೆ
ನಿರುತ ಜಗವ ಪೊರೆಯುತಿರ್ಪುದು || ೧ ||

ಮರೆಯಲಾರನೆಮ್ಮ ಸ್ವಾಮಿ ಮರೆತರೂ ನಾವವನ ನಿತ್ಯ
ಪೊರೆವನೆಮ್ಮನೆಲ್ಲಾ ಕಾಲಕೆ–ಹೀಗಿರಲು ಮನುಜ
ಸ್ಮರಿಸಲವನನೇಕೆ ನಾಚಿಕೆ ? || ೨ ||

ತಾಯಿಯಲ್ಲವೇನೊ ನಿನಗೆ ? ಬಾಯೊಳೊಮ್ಮೆ ಸ್ಮರಿಸಲೊಲ್ಲೆ !
ತಾಯಿ ತಂದೆ ಕೋಟಿ ಕೋಟಿಯು–ರಕ್ಷಿಸುವ ಸ್ವಾಮಿ
ತಾಯಿ ಈ ಬ್ರಹ್ಮಾಂಡ ಕೋಟಿಯು || ೩ ||

ದೇವತಾನುಗ್ರಹವು ಬೇಕೊ ! ಯಾವನು ನೀನಾದರೇನು ?
ಭಾವಿಸೆ ನೀ ಮರ್ತ್ಯನಲ್ಲವೆ ?–ಅದು ಕಾರಣದಿ
ದೈವವ ಮೆಚ್ಚಿಸಬೇಡವೇ ? || ೪ ||

ನಿದ್ರೆಯೊಳು ಮೈಮರೆತು ಬಿದ್ದ ನಿನ್ನನೆಚ್ಚರಿಸಿ
ತಿದ್ದಿ ಮನವ ಸತತ ಪ್ರೇರಿಪ–ಸರ್ವೇಶ್ವರನ
ಶುದ್ಧ ಮನದಿ ಭಜಿಸೆ ರಕ್ಷಿಪ || ೫ ||

ಖೂಳ ಮಾನವನೆ ನೀನು ಮಾಲೋಲನ ಮರೆತರೂ ಕೃ
ಪಾಳು ನಿನ್ನ ಮರೆಯನೆಂದಿಗೂ–ಅನಿಮಿತ್ತ ಬಂಧು
ಬಾಲನೆಂದು ಪೊರೆವನೆಂದಿಗೂ || ೬ ||

ನಿನ್ನ ಧರ್ಮ ಕರ್ಮವದನು ಮುನ್ನವೇ ನೀ ತಿಳಿದು ನಿತ್ಯ
ಸನ್ನುತಾರಿಧ್ವಜನ ನುತಿಸಲು–ಪುಣ್ಯವ ಗಳಿಸಿ
ಧನ್ಯನಾಗುವೆಯೊ ಧರೆಯೊಳು || ೭ ||

## (೨) ಪರಮಾತ್ಮನು ಅನಂತ ಮಹಿಮನು

ಸರ್ವಾಂತರ್ಯಾಮಿಯು ಆವನು ಸರ್ವಶಕ್ತ ಸರ್ವವ್ಯಾಪ್ತ
ಸರ್ವಜ್ಞ ಸರ್ವೇಶನೆನ್ನುತ–ಸ್ಮರಿಸುವುದು ನಿತ್ಯ
ಸರ್ವ ಜೀವರನವರತ ॥ ೮ ॥

ಸರ್ವಕರ್ತ ಸರ್ವಭೋಕ್ತ ಸರ್ವತಂತ್ರ ಸುಸ್ವತಂತ್ರ
ಸರ್ವಗುಣಾನಂದಭರಿತ–ಸಚ್ಚರಿತನೆಂದು
ಸರ್ವರು ಭಜಿಪುದು ಸಂತತ ॥ ೯ ॥

ಸರ್ವ ಕಾರಣನು ಜಗಕೆ ಸರ್ವ ಸ್ವಾಮಿ ಶಾಶ್ವತನು
ಸರ್ವಜೀವ ಪಯಾಮಯನು–ಸತ್ಯ ಸ್ವರೂಪ
ಸರ್ವದೇವ ನಿಯಾಮಕನು ॥ ೧೦ ॥

ಸರ್ವಕಾಲ ಸರ್ವಶ್ರುತ ಸರ್ವಸಾಕ್ಷಿ ಸರ್ವಹಿತ
ಸರ್ವಶತ್ರುಸಂಹಾರಕನು–ಸಜ್ಜನ ಪ್ರೇಮಿ
ಸರ್ವದೇವವಂದ್ಯನವನು ॥ ೧೧ ॥

ಸರ್ವದುಷ್ಟ ಶಕ್ತಿ ಹಾರಿ ಸರ್ವಭಕ್ತ ಸೌಖ್ಯಕಾರಿ
ಸರ್ವಂಸಹಾರಮಣನವನು–ಸರ್ವಮೂಲನು
ಸರ್ವವಿದ್ಯಾನಿಲಯನವನು ॥ ೧೨ ॥

ಹಾಳು ಮೂಳು ಗೀತೆಗಳನು ಕೇಳಿ ಮನವ ಕೆಡಿಪೆಯೇಕೆ ?
ಶ್ರೀಲತಾಂಗಿಯಳ ರಮಣನ–ಮೆಚ್ಚಿಸು ನೀನೀ
ಯಾಲಪದವ ಹಾಡುತಾತನ ॥ ೧೩ ॥

ಕೇಳೀ ಪದವನಿದರ ಬೋಧೆ ತಾಳಿ ಮನದಿ ಸದ್ವಿಚಾರ
ಮಾಲೆಯ ಪರಿಶೀಲಿಸುತ್ತಲಿ-ಆಚರಿಸುವಂಥ
ಶೀಲ ಮತಿಯು ನಿನಗೆ ಲಭಿಸಲಿ ॥ ೧೪ ॥

ಮನುಜನಿಗೆ ಸದಸದ್ ವಿವೇಚನೆಯು ಮೇಣ್ ಧಾರಣಾ ಶಕ್ತಿ
ಯನುಭವ ಜ್ಞಾನ ವಿಮರ್ಶೆಯು–ಈ ಗುಣಗಳು ಸಂ
ಜನಿಸಲಹುದು ದೈವ ಕೃಪೆಯು ॥ ೧೫ ॥

## ನಲವತ್ತೇಳನೆಯ ಸಂಧಿ

### ಪಶ್ಚಾತ್ತಾಪ ಪ್ರಾಯಶ್ಚಿತ್ತ

ಒಂದು ಕಾಲದಲ್ಲಿ ಗರ್ವದಿಂದ ಮೆರೆದು ತನ್ನದೆಂದ
ಮಂದಿ ಜನಕೆ ದ್ರೋಹಗೈದುದ—ತಾ ಹೇಳಿದಂತೆ
ಹಿಂದೆ ಮುಂದೆ ನುತಿಸಿಕೊಂಡುದ || ೧ ||

ಎಲ್ಲ ತನ್ನಪೇಕ್ಷೆಯಂತೆ ಬೆಲ್ಲದಂತೆ ನಡೆಯುತಿರಲು
ಎಲ್ಲವೂ ತನ್ನಿಂದಲೆಂದುದ—ದೇವರು ಗೀವ
ರೆಲ್ಲವೂ ಬೇರಿಲ್ಲವೆಂದುದ || ೨ ||

ಕಾಲಗತಿಯು ತಪ್ಪಿದಾಗ ಬಾಳಿನಲ್ಲಿ ಕಹಿಯುಂಡಾಗ
ಕೀಲು ಮುರಿದು ಬಲಗುಂದಿದಾಗ—ತನ್ನವಿವೇಕ
ಸಾಲಿಟ್ಟು ಸ್ಮರಣೆಗೆ ಬಂದಾಗ || ೩ ||

ಹೆಣ್ಣು ಮಕ್ಕಳ ಹೊಟ್ಟೆಯುರಿಸಿ ಬಣ್ಣಗೆಟ್ಟು ಬೈದು ಹೊಡೆದು
ಕಣ್ಣಗಾಗುವಂತೆಗೈದುದ—ಹೆಣ್ಣಿನ ಸುಖ
ಮಣ್ಣುಗೂಡಿಸಲು ಬಗೆದುದ || ೪ ||

ಹಣಕೆ ಬಾಯಿ ಬಿಟ್ಟು ಹೆಣಗಿ ಹೆಣವಾಗಿ ಕುಳಿತಾಗ ಹಿಂದೆ
ಹಣದ ಗಳಿಕೆಗಾಗಿ ಮಾಡಿದ—ಸಾವಿರ ತಪ್ಪ
ಗುಣವೆಂದೇ ಭುಜ ತಟ್ಟಿಕೊಂಡುದ || ೫ ||

ದುರಹಂಕಾರ ಮಾತನಾಡಿ ದುರುದುಂಬಿಯು ತೆರದೂಳಾಡಿ
ಗುರುವಾಕ್ಯವನಲ್ಲಗಳೆದುದ—ಬುದ್ಧಿಯ ಪೇಳ್ದ
ಹಿರಿಯರನುಪೇಕ್ಷಿಸಿದುದ || ೬ ||

ಪತಿಯ ಹಿತವನೆಣಿಸದುದ ಪತಿಯು ವ್ರತವಾಚರಿಸದುದ
ಪತಿದೈವವೆಂಬುದ ಮರೆದುದ—ಪತಿ ಪೇಳ್ದ ಸುಸಂ
ಗತಿಗಳನುಪೇಕ್ಷೆಗೈದುದ || ೭ ||

ಘೋರತರ ಸಂಸಾರದಿ ಸಾರಾಸಾರವರಿತು ನಡೆವ
ನಾರಿಮಣಿಯರನು ಜರೆದುದ–ಸತಿ ಹಿತವ ಮರೆತು
ಕ್ರೂರತನದಿ ವರ್ತಿಸಿದುದ || ೮ ||

ಮಾತಾಪಿತರ ಹಳಿದು ತನ್ನ ಮಾತೇ ನಡೆಸಿಕೊಂಡು ವಿನಯ
ನೀತಿ ವಿಧೇಯತೆಯ ತೊರೆದುದ–ಜಗದಲಿ ಪರಮ
ಪಾತಕಿ ಘಾತಕಿಯಾದುದ || ೯ ||

ನೋಡಿದವರೇನೆಂದು ತಾವಾಡುವರೀ ಕಾರ್ಯ ಮುಂದ
ಕೇಡ ತರುವುದೆಂದೂಹಿಸದ–ಯೋಚನೆಯೇ ಮಾಡ
ದಾಡಬಾರದಾಟ ಕಟ್ಟಿದ || ೧೦ ||

ಬೆಳೆದ ದವಸ ಧಾನ್ಯಗಳ ತಿಳಿದೂ ತಿಳಿದೂ ಬಚ್ಚಿಟ್ಟಿದ
ಕೊಳೆತ ಹುಳಿತ ಬಳಿಕ ತೆಗೆದುದ–ಕಲ್ಮಣ್ಣು ಬೆರಸಿ
ಬೆಲೆ ಹೆಚ್ಚಿಸಿ ಮಾರುತಿರ್ದುದ || ೧೧ ||

ನಿತ್ಯ ಬಳಕೆ ವಸ್ತುಗಳಿಗೆ ಅತ್ಯಧಿಕ ಬೆಲೆಯ ವಿಧಿಸಿ
ತುತ್ತು ಹಿಟ್ಟು ಸಿಕ್ಕದಂತಿರೆ–ಬಡಬಗ್ಗರೆಲ್ಲ
ಸತ್ತು ಸುಣ್ಣವಾಗುತಲಿರೆ || ೧೨ ||

ದೇಶವ ರಕ್ಷಿಸುವೆನೆಂದು ಭಾಷಣವ ಬಿಗಿದು ಮತ್ತೆ
ದೇಶಕೇ ದ್ರೋಹವ ಬಗೆದುದ–ಸ್ವಾರ್ಥದಿ ತಾನು
ವೇಷಭೂಷಣದಲಿ ಮೆರೆ ುದ || ೧೩ ||

ಕರ್ತವ್ಯ ಪ್ರಜ್ಞೆಯ ಮರೆತು ಕಾಲದ ಬೆಲೆಯನು ಮರೆತು
ನಿತ್ಯ ನಿಯುತ ಕೆಲಸ ಕಾರ್ಯ–ನಿರ್ವಹಣೆ ಬಿಟ್ಟು
ನ್ಮತ್ತನಾಗಿ ದರ್ಪ ತೋರ್ದುದ || ೧೪ ||

ಒಂದೊಂದನೆ ಚಿಂತಿಸುತ ಹಿಂದು ಮುಂದು ತೋರದಲಿ
ಹಿಂದೆ ತಾ ಮಾಡಿದ ಕೃತ್ಯಕೆ–ಪರಿತಪಿಸಿದರೆ
ಬಂದುದೇನು ಭಾಗ್ಯ ನರಕ ? || ೧೫ ||

ಕಾಲ ಕರ್ಮ ಮೃತ್ಯು ಪ್ರಜ್ಞೆ ಪಾಪ ಭೀತಿ ಧರ್ಮ ಶ್ರದ್ಧೆ
ಕಾಲನಾಲಯವ ತಪ್ಪಿಸಿ–ಕಾಯ್ವುದು ಜನರ
ಶೀಲ ಸತ್ಸ್ವಭಾವ ಹೆಚ್ಚಿಸಿ ॥ ೧೬ ॥

ಒಟ್ಟಿನಲ್ಲಿ ಗುಣವೇ ಮುಖ್ಯ ಶಿಷ್ಟನೆನಿಸೆ ಮಾನವಗೆ
ಗುಟ್ಟಿದು ಮಾನುಷ ಜನ್ಮಕೆ !—ಇದನರಿತವಂಗೆ
ಕಟ್ಟಿಟ್ಟ ಬುತ್ತಿಯು ಸೌಖ್ಯಕೆ ॥ ೧೭ ॥

## ನಲವತ್ತೆಂಟನೆಯ ಸಂಧಿ

### (೧) ಜೀವನ ವಿಮರ್ಶೆ

ಮಾನವ ಜೀವನ ವಿಮರ್ಶೆ ನಾನಾ ಹಂತದೊಳು ಗೈದು
ಜ್ಞಾನಿಗಳವತಾರ ಪುರುಷರು–ತಮ್ಮನುಭವವ
ಮಾನವರಿಗೆ ಸಾರಿ ಪೋದರು ||೧||

ಪುಣ್ಯವಂತರವರು ಲೋಕಮಾನ್ಯ ಜೀವರವರು ಪರಮ
ಧನ್ಯರು ಪೂತಾತ್ಮ ಚರಿತರು–ಸನ್ಮಾರ್ಗ ತೋರ್ದ
ಗಣ್ಯರು ಘನ ಮಹಿಮಾವಂತರು ||೨||

ಹಲವು ಕಾರಣಗಳು ಸೇರಿ ಹಲವು ಸಂಸ್ಕಾರಗಳು ಕೂಡಿ
ಹಲವು ಮತದ ಕಾಲ ದೇಶದ–ಹಿರಿಯರ ಬಾಳ
ಹಲವು ವಿಮರ್ಶೆಗಳು ಸಾರಿದ ||೩||

ಸಾರ ಬೋಧೆ ಲಭಿಸಿ ಜನರು ಸಾರ ಸುಖವ ಪಡೆಯಲಿಂದು
ದಾರಿದೀಪವಾಗಿ ಮೆರೆದಿದೆ–ಇದ ಲಕ್ಷಿಸದೆ
ಪೋರರಿದನು ತಪ್ಪು ತಿಳಿವುದೆ ? ||೪||

ದಾನ ಧರ್ಮ ಕೃತಿಗಳಿಂದು ದಾನವಾಕೃತಿಯನೆ ತಳೆದು
ದೀನರಬಲರಾರ್ತ ಜನರನು–ಧಿಕ್ಕರಿಸುತ
ಹೀನ ಬುದ್ಧಿಯಾದ ಮನುಜನು ||೫||

ಹಣವೆ ಮಿಗಿಲು ಗುಣಕೆ ದಿಗಿಲು ಹಣವಂತನೇ ಗುಣವಂತನು
ಹಣವೊಂದಿಲ್ಲದಿರೆ ಪಾಮರ !–ಈತನ ಜನರು
ಗಣಿಸುತಿಹರಿಂದು ವಾನರ ! ||೬||

ಕಾಡಬಹುದೆ ಪರರ ನೋವ ನೋಡಿ ಸುಮ್ಮನಿರಲುಬಹುದೆ ?
ರೂಢಿಯೊಳಗೆ ದೀನದಲಿತರ–ಕಾಣುತ ಮರುಗಿ
ಮಾಡದಿಹರೆ ಕಿಂಚಿದುಪಕಾರ ||೭||

ಬೇಡವೆಂದು ಹೇಳಿದುದ ಮಾಡಿ ಕೆಟ್ಟರೆನಿತೊ ಮಂದಿ
ಕೇಡ ಬಯಸಿ ಸಜ್ಜನರಿಗೆ–ಮೂರ್ಖರು ಕಡೆಗೆ
ಓಡಿದರು ಯಮನ ಬೀಡಿಗೆ || ೮ ||

ಮುಚ್ಚು ಮರೆಯೇ ಇಲ್ಲದಂತೆ ಸ್ವಚ್ಛ ಮನದೊಳಿದ್ದು ಭವದ
ಹೆಚ್ಚು ಕಡಿಮೆಗಳನು ತೂಗಿಸಿ–ಜೀವಮಾನವನು
ಬಿಚ್ಚು ಹೃದಯದಿಂದ ಸಾಗಿಸಿ || ೯ ||

ಮಾನುಷ ಜನುಮವ ದಿವ್ಯ ಜ್ಞಾನ ಚಕ್ಷುವಿಂದ ನೋಡಿ
ಸಾನುರಾಗದಲಿ ಸಾರ್ಥಕ–ವಾಗಿಸದಿರೆ
ಮಾನವನ ಬಾಳ್ ನಿರರ್ಥಕ || ೧೦ ||

## (೨) ಬದುಕಿನ ಬೆಲೆ

ತನ್ನ ಧರ್ಮವಾಚರಿಸದನ್ಯಧರ್ಮಕೆಳಸುವವ
ತನ್ನ ಮರೆತ ಖೂಳನಲ್ಲವೆ ?–ಕೆಟ್ಟು ಬಾಳುವ
ಕುನ್ನಿಯಂಥ ಜೀವಿಯಲ್ಲವೆ ? || ೧೧ ||

ತನ್ನ ಧರ್ಮವರಿಯದವನನ್ಯರಿಗುಪದೇಶವೀವ !
ತನ್ನ ಮಾರ್ಗ ಸಂಬದವನು–ಬಾಳಿನೊಳೆಂತು
ಜನ್ಮ ಸಾಫಲ್ಯವ ಪಡೆವನು ? || ೧೨ ||

ಅಪಶಬ್ದವನಾಡುವವನಪಕೃತ್ಯವ ಮಾಡುವವ
ನಪಹಾಸ್ಯದಿ ಸಜ್ಜನರನು–ದೂಷಿಸುವವ
ನಪವಿತ್ರನೆನಿಸನೆ ಮೂರ್ಖನು ? || ೧೩ ||

ಸ್ವಚ್ಛ ನಡತೆಯಿಲ್ಲದವ ಮುಚ್ಚುಮರೆಯ ಮಾಡುವವ
ತುಚ್ಛ ವಿಷಯಗಳಿಗೆ ಸೋಲ್ವವ–ತಪ್ಪದೆ ಬಾಳ
ಕಿಚ್ಚಿನೊಳಗೆ ಬೆಂದು ಸಾಯುವ || ೧೪ ||

ಕಳ್ಳು ಕುಡಿವ ಸುಳ್ಳು ಹೇಳ್ವ ಕಳ್ಳತನವ ಮಾಳ್ಪ ಜನರಿ
ಗೆಲ್ಲಿದೆ ಜೀವನ ಸೌಖ್ಯವು ?–ಅವರೊಂದು ದಿನ
ಗಲ್ಲಿಗೇರುವುದೆ ಸತ್ಯವು || ೧೫ ||

ಹೊರಗೆ ನೋಳ್ಪ ಜನರ ಕಣ್ಗೆ ಪರಮ ಸುಜನರಂತೆ ನಟಿಸಿ
ಮರೆಯಲ್ಲಿ ಮೊಸಳೆಗಳಂತಿರ್ಪ–ಗೋಮುಖವ್ಯಾಘ್ರ
ನರರುದ್ಧಾರವೆಂತಾಗುವುದಪ್ಪ ? || ೧೬ ||

ಎಚ್ಚರವೆಚ್ಚರವೆಂದು ಚುಚ್ಚು ಮನದಿ ಸಾರಿ ಹರಿಯ
ಮೆಚ್ಚಿಸಿ ನಡೆದಿರುವ ಹಿರಿಯರ–ಮಾರ್ಗವ ಬಿಟ್ಟು
ಹುಚ್ಚನಾಗದಿರೋ ಪಾಮರ ! || ೧೭ ||

ಗಣ್ಯ ಮನುಜರೊಡನೆ ಸೇರಿ ಮಾನ್ಯನು ತಾನೆಂದೆನಿಸಿ
ಪುಣ್ಯ ಕೃತಿ ಕರ್ಮ ವಿಷಯವ–ಸಾಧಿಸುವಾತ
ಧನ್ಯ ! ಧನ್ಯ ! ಸದ್ಗುಣಿಯವ ! || ೧೮ ||

ಹತ್ತರೊಳಗೊಂದೆನುತ್ತಲುತ್ತಮಶ್ಲೋಕನ ಭಜಿಸೆ
ಉತ್ತಮ ಮಾರ್ಗವ ಕಾಣಿಸಿ–ಸಲಹುವ ಸ್ವಾಮಿ
ಉತ್ತಮ ಪದವಿಯ ಕರುಣಿಸಿ || ೧೯ ||

ಅಂತರಂಗದಲ್ಲಿ ಸಹಜ ಶಾಂತಿ ಭಾವ ತಾಳಿ ಧರ್ಮ
ಚಿಂತನೆಯ ನಡೆಸುತನುದಿನ-ರಾಜಿಪ ನರಗೆ
ಸಂತೋಷ ಸಂತೃಪ್ತಿ ಪ್ರತಿದಿನ || ೨೦ ||

ಗೀಚುತಿರುವೆನೆನ್ನಮನಕೆ ತೋಚಿದಂತೆ ವಿಷಯಗಳ
ದೋಚಿ ಬಾಚಿ ಗುರುಹಿರಿಯರ - ಬೋಧೆಗಳ ತಾಪ
ಮೋಚಕವಿದಾಗಲಿ ಕುಜನರ || ೨೧ ||

ಅವನಿಜಾರಮಣ ಶ್ರೀ ರಘುವರನಂಘ್ರಿ ಕಮಲಯುಗಳ
ಸ್ತವನಗೈದು ಧನ್ಯ ಜೀವನ–ನಡೆಸೆಲೊ ಜೀವ !
ಕವಿವ ಶಂಕಯ ನೂಕುತನುದಿನ || ೨೨ ||

## ನಲವತ್ತೊಂಭತ್ತನೆಯ ಸಂಧಿ

### (೧) ಬದುಕು ಹಸನಾಗಲಿ

ಬಿತ್ತಿ ಬೆಳಸಿ ಕಿತ್ತುಕೊಂಬ ಕರ್ತ ನಾರಾಯಣನ ಮರೆಯೆ
ಹೊತ್ತು ಬರಲು ಮೃತ್ಯು ಬಿಡುವಳೆ?—ಜೀವನೆ ಮೂರು
ಹೊತ್ತೂ ಹರಿಯ ನೆನೆಯೆಲೊ ಮರುಳೆ? ॥ ೧ ॥

ಹೊತ್ತುಗೊತ್ತಿಗೆಲ್ಲ ನಿನ್ನ ಗೊತ್ತಾದ ಗುರಿಯು ಬಾಳ
ಕರ್ತವ್ಯಗಳನ್ನು ಮಾಡುತ—ಬಾಳೆಲೊ! ಹಿತವ
ಹೆತ್ತಾರು ಮುಂದಿಗೆ ಬಯಸುತ ॥ ೨ ॥

ಪುಣ್ಯ ಕಾರ್ಯ ಮಾಡಿರೆಂದು ಪುಣ್ಯ ಸಂಪಾದಿಸಿರೆಂದು
ಪುಣ್ಯವಂತರಾಗಿರೆನ್ನುತ—ಪುಣ್ಯಾತ್ಮರೆಂದ
ಪುಣ್ಯ ವಾಣಿಯಂತೆ ನಡೆಯುತ ॥ ೩ ॥

ಅದ್ಭುತದೀಲೋಕದೊಳಗುದ್ಭವಿಸಿ ಬರಲು ನೀನು
ಅದ್ಭುತ ಕಾರಣವೇನೆಂದು—ತಿಳಿವುದು ಗುರು
ಸದ್ಬೋಧೆಯಲಿ ನೀನು ಯಾರೆಂದು ॥ ೪ ॥

ನಿನ್ನ ನಿನ್ನ ತಂದೆ ತಾಯಿ ನಿನ್ನ ನಿನ್ನ ಬಂಧು ಬಳಗ
ನಿನ್ನ ನಿನ್ನ ಗುರು ಹಿರಿಯರ—ಮಾರ್ಗದಿ ನಡೆ
ನಿನ್ನ ರೀತಿ ಜರಿಯದನ್ಯರ ॥ ೫ ॥

ರಾಮನೊ ಕೃಷ್ಣನೊ ಶಿವನೊ ಸ್ವಾಮಿ ನಿನಗೆ ಯಾರೊ ಅವನ
ನೇಮದಿ ಭಜಿಸಿ ಲೋಕಕೆ—ಉಪಕಾರಿಯೆನಿಸು
ವೈಮನಸ್ಯವೇತಕಿದಕೆ? ॥ ೬ ॥

## (೨) ಎಚ್ಚರಿಕೆ! ಜೋಕೆ!

ಕಣ್ಣು ಕುಕ್ಕುವಂಥ ನೋಟ, ಮಣ್ಣು ಮುಕ್ಕುವಂಥ ಕೆಲಸ
ಹೆಣ್ಣು ಹೊನ್ನು ಮಣ್ಣಿಗಾಗಿಯೆ–ಮಾಡೀಯೆ ಜೋಕೆ !
ಹುಣ್ಣು ಹುಳಿತು ನಶಿಸಿ ಹೋದೀಯೆ ! ॥ ೭ ॥

ತಿರುಗಿ ಬರುವುದೇನೊ ನಿನಗೆ ನರನ ಶ್ರೇಷ್ಠ ಜನುಮ ಕೇಳೊ !
ಅರಿತು ಜ್ಞಾನಿಯಾಗಿ ಬದುಕನು–ನಡೆಸುತ ನಿನ್ನ
ಗುರಿಯ ಸೇರೊ ಸದ್ಗತಿಯನು ॥ ೮ ॥

ಏನೂ ತಿಳಿಯದಿರುವ ನೀನು ಜ್ಞಾನಿಯೆಂದು ಹೇಗೆ ತಿಳಿವೆ ?
ಧ್ಯಾನ ಮೌನ ಸತ್ಯದರ್ಶನ–ಸಾಧನೆಗಳುಂಟೆ ?
ಏನುಂಟು ನಿನ್ನೊಳು ನಿದರ್ಶನ ! ॥ ೯ ॥

ಲೋಕದ ಕಣ್ಣಿನ ಮುಂದೆ ಬೇಕಾದುದೆಲ್ಲ ನೀ ಮಾಡೆ
ಲೋಕ ಸಾಕ್ಷಿ ಸುಮ್ಮನಿರುವನೆ ?–ಕೋಪಿಸಿ ನಿನ್ನೀ
ಲೋಕದಿಂದ ಮೊದಲು ತೆಗೆಯನೆ ? ॥ ೧೦ ॥

ಮನದೊಳಿದ್ದು ದೇವನೆಮಗೆ ಕ್ಷಣ ಕ್ಷಣದಿ ಜೋಕೆ ! ಜೋಕೆ !
ಅನುಸರಿಸು ಮಾರ್ಗವಿದನು–ಎಂದೆಚ್ಚರಿಕೆ
ಯನು ಸದಾ ನೀಡುತಲಿರುವನು ॥ ೧೧ ॥

ಇದನು ನಾವು ನಿರ್ಲಕ್ಷಿಸಿ ಮದದಿ ಹಿಗ್ಗಿ ಮುಂದೆ ನುಗ್ಗಿ
ಎದೆಗೆ ಕಲ್ಲು ಬಡಿದು ಬೀಳ್ವೆವು–ಚಿನ್ನದ ಬಾಳ
ಬದುಕನೆಲ್ಲ ವ್ಯರ್ಥಗೈವೆವು ॥ ೧೨ ॥

## (೩) ವಿದ್ಯೆ–ಬುದ್ಧಿ

ಓದು ಕಲಿತ ವಿದ್ಯೆಯಿಂದಲಾದೀತು ನಿನ್ನುದರಭರಣ !
ಸಾಧಿಸುವುದೆ ಸದ್ಗತಿಯನು–ಸುಜ್ಞಾನ ಪಡೆದು
ಸಾಧಿಸೊ ನೀ ನಿತ್ಯ ಸುಖವನು ॥ ೧೩ ॥

ಹೆಚ್ಚು ವಿದ್ಯೆಯೋದಿದವ ಹೆಚ್ಚು ಹಣವ ಗಳಿಸಬಹುದು !
ಹೆಚ್ಚೇನ ಸಾಧಿಸಬಲ್ಲನೊ ?–ಸದ್ಬುದ್ಧಿ ಶೂನ್ಯ
ಹುಚ್ಚು ಹಿಡಿದು ಕಡೆಗೆ ಕೆಡುವನೊ ! || ೧೪ ||

ವಿದ್ಯೆಗಳನೇಕವುಂಟು ಉದ್ಯೋಗವನೇಕವುಂಟು
ಬುದ್ಧಿಯುಂಟು ದೈವದತ್ತವು–ಇವುಗಳೆಲ್ಲ
ದೊಡ್ಡದು ಬುದ್ಧಿಯು ಪಾತ್ರವು ! || ೧೫ ||

ಬುದ್ಧಿಗೆ ವಿದ್ಯೆಯು ಸೇರಿ ವಿದ್ಯೆಗೆ ವಿನಯವು ಸೇರಿ
ಸದ್ವಿನಯಕೆ ಶಿಷ್ಟಾಚಾರವು–ಸೇರಲು ಮನುಜ
ನುದ್ಧಾರಕಾಯಿತು ಮಾರ್ಗವು ! || ೧೬ ||

ಜ್ಞಾನಿಯೆನಿಸಲು ಲಾಭವೇನು ಬಂತು ? ವಿವಿಧ ಶಾಸ್ತ್ರ
ತಾನೋದಿ ವಿದ್ವಾಂಸನಹನು !–ಇಷ್ಟಾದರೂ ವಿ
ಜ್ಞಾನಿಯಂತೂ ಆಗಲಾರನು || ೧೭ ||

ಲೋಕವನರಿತ ಪುಣ್ಯಶ್ಲೋಕರೆ ವಿಜ್ಞಾನಿಗಳು !
ಲೋಕಕೆ ಗುರುಗಳಾದರು–ಲೋಕದ ಮನುಜಾ
ನೀಕಕೆ ಸುಜ್ಞಾನವಿತ್ತರು || ೧೮ ||

# ಐವತ್ತನೆಯ ಸಂಧಿ

## (೧) ನಾವು ಭಾರತೀಯರೆ ?

ಭರತ ಭೂಮಿ ಕಥೆಯ ಕೇಳಿ–ಪರದಾಸ್ಯ ವಿಮುಕ್ತರಾಗಿ
ಪರಮ ಸ್ವಾತಂತ್ರ್ಯವು ದೊರಕಲು–ಭಾರತದ ಜನರು
ಸರುವ ಸುಖದಿ ಬಾಳಿ ಬಗುಕಲು ॥ ೧ ॥

ಹಿಂದಿನ ನೂರಾರು ವರುಷದಿಂದನೇಕ ದೇಶ ಭಕ್ತ
ರೊಂದೊಂದು ಕಾಲಕು ಬೋಧಿಸಿ–ಪ್ರಜೆಗಳ ಮನದ
ಸಂದೇಹವ ಹೋಗಲಾಡಿಸಿ ॥ ೨ ॥

ಹಲವು ರಾಜಕಾರಣಿಗಳು ಹಲವು ಸಾಧು ಸಂತ ಜನರು
ಹಲವು ರಾಷ್ಟ್ರ ಪ್ರೇಮಿಗಳೆಲ್ಲ ಜಾಗೃತಿಗೊಳಿಸಿ
ಬಲಪಡಿಸಿ ನಮ್ಮವರನೆಲ್ಲ ॥ ೩ ॥

ನಿಮ್ಮ ರಾಜ್ಯ ನಿಮ್ಮ ಕೈಲಿ ನಿಮ್ಮ ಸೌಖ್ಯ ನಿಮ್ಮ ಕೈಲಿ
ನೆಮ್ಮದಿಯಲಿ ಬಾಳಿ ನೀವೆಂದು–ಸ್ವಾತಂತ್ರ್ಯ ಕೊಡಿಸಿ
ನಮ್ಮನೆಲ್ಲ ಹರಸಿದರಂದು ! ॥ ೪ ॥

ಭಾರತದಾದ್ಯಂತ ಜಯಭೇರಿ ತಾನು ಮೊಳಗುತಿರಲ
ಪಾರ ಪ್ರೇಮವನಂದು ತೋರ್ದುದು ಮಹಾತ್ಮರನ್ನು
ಗೌರವಿಸಿದುದೆಲ್ಲಿ ಪೋದುದು ? ॥ ೫ ॥

ಎನಿತು ದೇವರೆನಿತು ಗುರುಗಳೆನಿತು ನೀತಿ ಸತ್ಯ ಬೋಧೆ
ಜನರಿಗಾಯ್ತು ನಮ್ಮದೇಶದಿ–ಇಷ್ಟಾಗಿ ನಮಗೆ
ಜನಿಸಿತೆ ಸದ್ಬುದ್ಧಿ ಮನದಿ ? ॥ ೬ ॥

ಸಜ್ಜನ ಸಾಧುಗಳ ಸಂಗ ಹೆಜ್ಜೆ ಹೆಜ್ಜೆಗಾಗಲೆಂಬ
ಗೆಜ್ಜೆ ದಾಸರ ಪದಗಳೆಲ್ಲವು–ನಮ್ಮಯ ಪಾಲ್ಗೆ
ಗೆಜ್ಜಲ್ಹಿಡಿದು ನಶಿಸಿಪೋದುವು ॥ ೭ ॥

ದೈವ ಗುರು ಭಕ್ತಿಯಿಲ್ಲ ಜೀವಕಾರುಣ್ಯವು ಇಲ್ಲ
ಸೇವಾ ಮನೋಭಾವ ತಾನಿಲ್ಲ–ವಿವೇಕವಿಲ್ಲ
ಯಾವ ಯಾರ ಭೇದವೂ ಇಲ್ಲ ! ॥ ೮ ॥

ಮಳೆಯು ಬೆಳೆಯು ಪಶು ಸಮೃದ್ಧಿ–ನಲಿವ ಕೋಟಿ ಕೋಟಿ ಪ್ರಜೆಯು
ತಿಳಿದ ಜನರು ಸತ್ವಪೂರ್ಣರು–ಭಾರತದೊಳು
ತಿಳಿಯಲಿಂದು ಕಾಣದಾದರು ! ॥ ೯ ॥

ತತ್ತರಿಸುತಿಹರು ಪ್ರಜೆಗಳಿತ್ತ ನೋಡಿದರು ಜಗದಿ
ಕತ್ತಲೆಯೆ ಕವಿದುಕೊಂಡಿತು–ಮುಂಗಾಣದಂತೆ
ಹೊತ್ತುಗೊತ್ತಿಗನ್ನ ತಪ್ಪಿತು ॥ ೧೦ ॥

ಹರಿದು ಹಂಚಿ ತಿನ್ನುವಾಸೆ ಮುರಿದು ಮನೆಯ ಬದುಕುವಾಸೆ
ಸರಳ ಸುಂದರದ ಜೀವನ–ಕಲ್ಪನೆಯೋ ಇರದ
ನರಪ್ರಾಣಿಗಳ ಬದುಕು ಈ ದಿನ ! ॥ ೧೧ ॥

ತೋಟ ಗದ್ದೆ ಹೊಲಕೆ ಮನೆಗೆ ಕಾಟವೊಂದೊಂದಲ್ಲ ಒಳ
ತೋಟಿಯೆಷ್ಟು ಸಂಚು ಜನರೊಳು–ಕಡಿದಾಟವಾಗಿ
ಕೋಟಲೆ ಪ್ರತಿ ಸಂಸಾರದೊಳು ! ॥ ೧೨ ॥

## (೨) ಬದುಕಿನ ಹೋರಾಟ !

ನಾಡ ಮೂಲೆ ಮೂಲೆಯಲ್ಲಿ ಕಾಡನಲೆದು ಮಣ್ಣು ತುಳಿದು
ಗೂಡ ಸವೆಸುತಿಹ ರೈತಗೆ–ಸುಖದಿ ಹೊಟ್ಟೆ
ಪಾಡು ಸಾಗುತಿಹುದೆ ಇಂದಿಗೆ ? ॥ ೧೩ ॥

ಅವರ ಇವರ ಬವಣೆಗಳನು ಇವನು ನೀಗಲೆಂತು ಸಾಧ್ಯ ?
ಅವನೀಪತಿಯು ಇವನಾದೊಡೇನು ?–ಬಂದಿತು ಭಾಗ್ಯ
ಅವಿವೇಕವೇ ಕವಿಯಿತಿನ್ನೇನು ? ॥ ೧೪ ॥

ಎನಿತೊ ಮಂದಿ ವೀರ ಯೋಧರೆನಿತೊ ಮಂದಿ ದೇಶ ಭಕ್ತ
ರೆನಿತೊ ಮಂದಿ ಭರತ ಮಾತೆಯ–ಸುಪುತ್ರರಳಿದ
ರೆನಿತ ತಿಳಿದು ಬಿಡರು ಕುಮತಿಯು ! ॥ ೧೫ ॥

ಅಳಿದ ವೀರರವರೆ ಧನ್ಯರುಳಿದ ನಾವೇ ವೈರಿ ಜನರು
ತಿಳಿದು ತಿಳಿದು ನೀಚ ಕೃತ್ಯವ–ಮಾಡುತಲಿರಲು
ಗೆಲುವುದೆಂದು ತುಳಿದು ಶತ್ರುವ ॥ ೧೬ ॥

ಕ್ಷಾಮಡಾಮರಾದಿಗಳು ಧೂಮಕೇತು ಕಾಣಿಸುತ
ನೇಮ ನೀತಿ ಸತ್ಯ ಧರ್ಮವು–ನಶಿಸಿ ನಮ್ಮ
ಸೀಮೆಯಲಿ ಕಾಡುತಿರ್ಪವು ॥ ೧೭ ॥

## (೩) ವಿಪರೀತ ಮತಿಗಳು

ಧರ್ಮ ಭ್ರಷ್ಟ ಜನರು ತಮ್ಮ ಕರ್ಮ ಮರೆತು ನೀತಿಗೆಟ್ಟು
ನಿರ್ಮಮರಾಗಿ ಪುಣ್ಯ ಕಾರ್ಯವ–ಮಾಡದಂತಾಗಿ
ಕೂರ್ಮಕೂಪರಾದರೋ ದೇವ ! ॥ ೧೮ ॥

ಎತ್ತಣ ಪರಿಭವವಿದು ಕತ್ತಲೆಯು ಮಂಕು ಕವಿದು
ತತ್ತರಿಸುತಿಹರು ಎಲ್ಲೆಲ್ಲೂ–ದೇಶದ ಜನರು
ಎತ್ತಲಾರದೆ ತಲೆಯನಾವಲ್ಲೂ ॥ ೧೯ ॥

ಹೆಣ್ಣಿನಿಂದ ಜೀವಿಸುವ ಹಣ್ಣಿಗರೇ ಹೆಚ್ಚುತಿಹರು !
ಬಣ್ಣ ಬಣ್ಣ ವೇಷವ ಹಾಕಿ–ಹೆಣ್ಣುಗಳ ಮಾರಿ
ಮಣ್ಣುಬಾಳಿಗವರನು ನೂಕಿ ॥ ೨೦ ॥

ಹೆಣ್ಣು ಹೊರಗೆ ದುಡಿಯಬೇಕು ಹೆಣ್ಣು ಮನೆಗೆ ದುಡಿಯಬೇಕು
ಹೆಣ್ಣು ಹಡೆದು, ಗಂಡ-ಮಕ್ಕಳ–ಸಾಕುವ ಕಾಲ
ಬಣ್ಣಗೆಟ್ಟು ಬದುಕೊ ! ಕೇವಲ ॥ ೨೧ ॥

ಬಡತನವ ತಪ್ಪಿಸಲು ಬಡವರೇ ಇರದಂತೆ ಮಾಳ್ಪ
ಕೆಡುಕು ಯೋಚನೆಗಳಿಂದಿಗೆ !–ದುರಾಶೆಯಿಂದ
ಒಡಲು ತುಂಬಿದೊಡೆಯರಿಗೆ ॥ ೨೨ ॥

ಹೆಚ್ಚು ಹಾಲಿನಾಸೆಗಾಗಿ ಕೆಚ್ಚಲ ಕೊಯ್ವಂಥ ಬುದ್ಧಿ !
ಹುಚ್ಚು ಮಂದಿ ರಾಜ್ಯದೊಳಗೆ–ಪ್ರಜೆಗಳಿಗೆ
ಹೆಚ್ಚಿತು ನಿರಾಶೆ ಬಾಳಿಗೆ ॥ ೨೩ ॥

ಒಳಿತು ಜನರು ಹಲವರಿಲ್ಲ ಹಲವರಿವರ ನೋಳ್ಪರಿಲ್ಲ
ನಲಿವು ಗೆಲುವು ದೇಶಕಿನ್ನೆಂತು ?–ಈ ಪರಿ ನಮ್ಮ
ಚೆಲುವು ಭರತ ಭೂಮಿಗಾಯಿತು ! ॥ ೨೪ ॥

ಸಿರಿಯ ಸೂರೆ ಹೊಡೆಯುವಲ್ಲಿ ಕರುಣ ಕಕ್ಕುಲಾತಿಯೆಲ್ಲಿ ?
ದುರುಳ ಧೂರ್ತರಾಸಬಡುಕರ್ಗೆ ?–ಈ ದಿನಗಳಲಿ
ಮರಣವೇ ಸುಖವೇನೊ ಬಡವರ್ಗೆ ! ॥ ೨೫ ॥

## (೪) ನಾವು ಮಾನವರೊ ? ದಾನವರೊ ?

ಮನುಜ ಸಂಘ ಜೀವಿ ನಿಜವು ಮನುಜ ಸ್ವಾರ್ಥ ಜೀವಿ ನಿಜವು
ಮನುಜನೇಕೆ ದನುಜನಾದನು ?–ಇದೇನು ಬಂತೊ
ಬಿನುಗು ಬುದ್ಧಿ ತಾನೂ ಕೆಟ್ಟನು ॥ ೨೬ ॥

ಎಂಜಲಿನ ಲೋಕವಿದು ಗಂಜಿಗಾಗಿ ಬಳಲುತಿಹುದು !
ನಂಜನುಂಡು ಬದುಕಿದವರುಂಟೆ ?–ಪಾಪದ ಭೀತಿ
ಗಂಜದ ಸ್ವಾರ್ಥಿಗೆ ತಲೆಯುಂಟೆ ? ॥ ೨೭ ॥

ಹೀಗೆ ಲೋಕ ಮುಂದುವರಿಯೆ ಬೇಗೆ ಹತ್ತಿ ನಾಶವಹುದು !
ರೋಗ ದಾರಿದ್ರ್ಯಗಳ ಕಾಟದಿ–ಮಾನವರು ಸಾವ
ಬೇಗನಪ್ಪುವರು ಸತ್ಯದಿ ॥ ೨೮ ॥

ಅನ್ಯ ಜನರ ಹಳಿಯದಂತೆ ಅನ್ಯ ದೇಶ ತೆಗಳದಂತೆ
ಅನ್ಯ ಭಾಷೆ ಮತಗಳ ಪ್ರೀತಿ–ಸೌಹಾರ್ದವಿರೆ
ತನ್ನ ದೇಶಕಾಗ ಪ್ರಗತಿ || ೨೯ ||

ದೇವ ಶ್ರೀರಘುವರನ ದಯದಿ ಈ ವಸುಧೆಯ ಸರ್ವ ಜೀವ
ಯಾವಾವ ಕಾಲಕು ಸೌಖ್ಯದಿ ಬಾಳಲಿ ಶಾಂತಿ
ಭಾವ ಮೂಡಿ ಸದ್ಭಾವೈಕ್ಯದಿ || ೩೦ ||

## ಐವತ್ತೊಂದನೆಯ ಸಂಧಿ

### ನಾಮ ಸ್ಮರಣೆ

### (೧) ದಶಾವತಾರ ಸ್ತೋತ್ರ

ವೇದಗಳ ಕದ್ದ ರಾಕ್ಷಸಾಧಮ ಸೋಮಕನ ಶಿರ
ಛೇದಿಸುತಾ ವೇದ ಶಿಶುಗಳ–ಕಾಯ್ದ ಮತ್ಸ್ಯವ
ನೋಡಿ ಪರಿಹರಿಸೆಮ್ಮ ಪಾಪಗಳ ॥ ೧ ॥

ಮಂದರಾಚಲಕೆ ಬೆನ್ನ ಚೆಂದದಿಂದ ಕೊಟ್ಟ ಕೂರ್ಮ
ಸುಂದರ ಮೋಹಿನಿ ರೂಪನೆ–ದೀನರ ಪೊರೆಯೊ
ಇಂದಿರಾಪ್ರಾಣೇಶ ಭೂಪನೆ ॥ ೨ ॥

ಭೂದೇವಿಯನೆ ಕದ್ದೊಯ್ದ ಆ ದುಷ್ಟ ಹಿರಣ್ಯಾಕ್ಷನ
ಆದಿ ವರಾಹನ ರೂಪದಿ–ವಧಿಸಿದ ಸ್ವಾಮಿ
ಭೂಧವ ಸಲಹೆಮ್ಮ ದಯದಿ ॥ ೩ ॥

ಹರಿಯ ಪರಮ ವೈರಿಯಾದ ದುರುಳ ಹಿರಣ್ಯಕನನ್ನ
ನರಸಿಂಹರೂಪದಲಿ ಸೀಳಿದ–ಪ್ರಹ್ಲಾದ ವರದ
ಪೊರೆವುದಮ್ಮ ಪರಮ ಕೃಪೆಯಿಂದ ॥ ೪ ॥

ವಾಮನ ತ್ರಿವಿಕ್ರಮನೆ ನೀ ಮನೆ ಕಾಯ್ದಂತೆ ಬಲಿಯ
ಕಾಮಿಗಳಾದಮ್ಮ ಗರ್ವವ–ಮೆಟ್ಟುತ ಕಾಯೊ
ಸ್ವಾಮಿ ನೀನೆಮ್ಮಯ ಪ್ರಾಣವ ॥ ೫ ॥

ದುಷ್ಟ ಕ್ಷತ್ರಿಯರ ವಧಿಸಿ ಕಷ್ಟ ಕಳೆದ ಪರಶುರಾಮ
ದುಷ್ಟರೆಮ್ಮ ದುಶ್ಚಿಂತೆಗಳ–ಕಿತ್ತೊಗೆದು ನಿನ್ನ
ಇಷ್ಟರಪ್ಪಂತೀಯೊ ವರಗಳ ॥ ೬ ॥

ಭರತಗೆ ಪಾದುಕೆಯಿತ್ತ ಮರುತಜಗಜಪದವಿಯಿತ್ತ
ದುರುಳ ರಾವಣನ ವಧಿಸಿದ–ಜಾನಕೀರಮಣ
ವರದನಾಗೊ ನಮಗೆ ಸರ್ವದ ॥ ೭ ॥

ಭಂಡ ಕೌರವರ ಕೊಲಿಸಿ ಭೂಮಂಡಲ ಭಾರವ ಕಳೆದು
ಪಾಂಡವರ ಪೊರೆದ ಕೃಷ್ಣನೆ—ಗೀತೆಯ ಸುಧೆಯ
ನುಂಡು ತಣಿಯೆ ಹರಸು ನಮ್ಮನೆ || ೮ ||

ತ್ರಿಪುರ ದಹನ ಕಾಲದಲಿ ಕಪಟಿ ರಾಕ್ಷಸರ ವಧಿಸೆ
ಉಪಕರಿಸಿ ಹರಗೆ ನೆರವಾದ—ಬೌದ್ಧಾವತಾರಿ
ಸುಪವಿತ್ರಗೊಳಿಸೆಮ್ಮನು ಸದಾ || ೯ ||

ದುಷ್ಟರ ಹಾವಳಿ ಮೀರಿ ಶಿಷ್ಟರು ಕಲಿಬಾಧೆಯಿಂದ
ಕಷ್ಟಪಡಲು ಕಲ್ಕಿ ರೂಪದಿ—ಧರ್ಮವ ಕಾಯ್ವ
ಸೃಷ್ಟೀಶ ನಮೋ ಹೇ! ವಿನೋದಿ || ೧೦ ||

ಹತ್ತವತಾರದಿ ನಿಜ ಭಕ್ತರನುದ್ಧರಿಸುವನೆ
ಮತ್ತನಂತರೂಪ ತಾಳ್ದನೆ—ಶ್ರೀರಘುವರನೆ
ಮುಕ್ತಿದಾತ ದೇವದೇವನೆ || ೧೧ ||

## (೨) ಕೇಶವನಿಂದ ಕೃಷ್ಣನವರೆಗೆ

ಈ ಸಮಸ್ತ ವಿಶ್ವದೊಡೆಯ ಕ್ಲೇಶವ ಹರಿಹರಿಸೆಂದು
ಕೇಶವನ್ನ ನೆನೆಯಬಾರದೆ—ಮಾನವ ನಿನಗೆ
ಈ ಶರೀರ ಭ್ರಾಂತಿ ಸಾಲದ || ೧೨ ||

ನಾರಾಯಣನ ನಾಮ ಬಿಡದೆ ಪಾರಾಯಣಗೈಯೆ ನಿನಗೆ
ದೂರವಾಗಿ ಭವದ ರೋಗವು—ತಪ್ಪದೆ ಸುಖ
ಸಾರೆಯೊದಗಬಹುದು ಸತ್ಯವು || ೧೩ ||

ಈ ಧರೆಯ ಅಸ್ಥಿರದ ಖೇದಭರಿತ ಜೀವನದಿ
ಸಾದರದಿಂದೊಮ್ಮೆಯಾದರು—ಭಕ್ತಿಯಲಿ ನೀನು
ಮಾಧವನ್ನ ಮರೆಯದಿರು || ೧೪ ||

ನೋವು ದೇಹ ಮನಗಳನ್ನು ಆವರಿಸಿ ಕಾಡುವಾಗ
ಸಾವು ಮೇಲೆಂದೆನ್ನಿಸುತಿರೆ–ಬಾಳಲಿ ಜೀವ
ಗೋವಿಂದನ ಹೃದಯದಿ ಕರೆ ! ॥ ೧೫ ॥

ಉಷ್ಣ ಶೀತ ವಾತ ಪಿತ್ತ ಕುಷ್ಠವಪಸ್ಮಾರ ಕ್ಷಯ
ಮುಷ್ಟಿ ತೋರಿ ಪೀಡಿಸುವಾಗ–ಜಿತಮನದಿಂದ
ವಿಷ್ಣು ನಾಮ ಸ್ಮರಿಸೊ ನೀ ಬೇಗ ॥ ೧೬ ॥

ಮಧುವಿನಂತೆ ತೋರಿ ಮೊದಲು ತುದಿಗೆ ಕಾಲಕೂಟವೆನಿಸಿ
ಹೃದಯ ಸೆಳೆವ ವಿಷಯ ಬಾಧೆಯು–ತಪ್ಪಲು ನಿನಗೆ
ಮಧುಸೂದನನ ಪದವೇ ಗತಿಯು ॥ ೧೭ ॥

ವಕ್ರಗತಿಯ ಬಾಳಿನೊಳಗೆ ವಿಕ್ರಮದಿ ನಡೆದುಕೊಂಡು
ಪಕ್ರಮಿಸಿದ ಪುಣ್ಯ ಕಾರ್ಯವ–ಪೂರೈಸಲು ತ್ರಿ
ವಿಕ್ರಮನ ಸ್ಮರಿಸೊ ಮಾನವ ॥ ೧೮ ॥

ನೇಮ ಭಗವನ್ನಾಮ ಸ್ಮರಣೆ ನೇಮ ದಾನ ಧರ್ಮ ದಯೆ
ನೇಮ ಪರರಿಗುಪಕಾರವ–ಮಾಡಲು ನಿನ್ನ
ವಾಮನ ಮೆಚ್ಚುತ ಪೊರೆಯುವ ॥ ೧೯ ॥

ಹೋದ ಕಡೆಗೆ ಮನವ ಹರಿಸಿ ಬೀದಿ ಹೋರಿಯಾಗದಂತೆ
ಸಾದರದಿ ಸತ್ಯ ಮಾರ್ಗದಿ–ನಿಲ್ಲೆಲೊ ಜೀವ
ಶ್ರೀಧರ ರಕ್ಷಿಪನೊ ಮುದದಿ ॥ ೨೦ ॥

ಲೋಕ ಸುಖ ಬೇಕಾದರೆ ನಾಕ ಸುಖ ಬೇಕಾದರೆ
ಲೋಕ ನಾಕಾನಂತ ಕಾಲದ–ಸುಖಪಡೆಯಲು ಹೃ
ಷೀಕೇಶನ ಭಜಿಸು ಸರ್ವದ ॥ ೨೧ ॥

ಪದ್ಮಜನಯ್ಯನೆ ಮೂಲ ಪದ್ಮಜ ಜಾಂಡಕೆ ಕೇಳೂ
ಶ್ರದ್ಧೆಯಿಂದ ತಿಳಿಯುತಿದನು–ಹೃದಯದಿ ಭಜಿಸೊ
ಪದ್ಮನಾಭನಂಘ್ರಿಗಳನು ॥ ೨೨ ॥

ದಾಮೋದರನೆನಗೆ ಪರಮ ಸ್ವಾಮಿಯವನು ಎನ್ನಮನದ
ಧಾಮದಿ ನೆಲಸಲಿ ಸರ್ವದ–ಎಂದೆನಲು ನಿನ್ನ
ಕ್ಷೇಮ ವಹಿಸುವನು ಕಾಮದ ॥ ೨೩ ॥

ಶಂಕೆ ತತ್ವದರಿವಿನೊಳಾತಂಕಗಳನು ಪರಿಹರಿಸಿ
ಕಿಂಕರ ಭಾವದೊಳೆನ್ನನು–ಕಾಪಾಡುಯೆನಲು
ಸಂಕರ್ಷಣ ಪೊರೆವ ನಮ್ಮನು ॥ ೨೪ ॥

ಈ ಸಮಸ್ತ ಚರಾಚರಕೆ ವಾಸುದೇವನೀಶನೆಂದು
ದಾಸ ಭಕ್ತ ಋಷಿಪುಂಗವರು–ನೀಡಿದ ಬೋಧೆ
ಯಾಸರೆಯಿಂ ಮನನ ಮಾಡಿರು ॥ ೨೫ ॥

ವಿದ್ಯೆ ವಿನಯ ಸೌಹಾರ್ದವು ಸದ್ವಿವೇಕ ಸಚ್ಛೀಲವು
ವಿದ್ವಜ್ಜನರ ಸಂಗವಾಸವು–ಮೊದಲಾದ ಭಾಗ್ಯ
ಪ್ರದ್ಯುಮ್ನ ಕೃಪೆಯಿಂದ ಸಾಧ್ಯವು ॥ ೨೬ ॥

ತನುಮನ ಧನಂಗಳಾನೆ ಜನನೀ ಜನಕ ಸತಿಸುತಾದಿ
ಮನೆ ಮಂದಿಯ ಮೇಲಿನಾಸೆಗೆ–ಮಿಗಿಲಲ್ಲವೇನೂ
ಅನಿರುದ್ಧನ ಕರುಣ ನಮಗೆ ॥ ೨೭ ॥

ಪುರುಷೋತ್ತಮನವನೆ ಕೇಳೊ ಸಿರಿದೇವಿಯ ರಮಣನಾತ
ಪರಮೇಷ್ಠಿಗೆ ಜನುಮದಾತನು–ಶರ್ವಾದಿವಂದ್ಯ
ಪರಮ ಮುಕ್ತಿದಾತನಾತನು ॥ ೨೮ ॥

ಈ ಕ್ಷರ ಜಗತ್ತಿನೊಳಗೆ ಸಾಕ್ಷರಳು ಲಕ್ಷ್ಮಿ ಪರ
ಮಾಕ್ಷರನೆ ಪರಮಾತ್ಮನು–ಎಂದರಿತು ನೆನೆಯ
ಧೋಕ್ಷಜನ ಪಾದಪದ್ಮವನು ॥ ೨೯ ॥

ನಾರಸಿಂಹನನ್ನು ಭಜಿಸೆ ಘೋರ ಪಾಪ ರಾಶಿಯು ಸಂ
ಹಾರವಪ್ಪುದೆಂಬುದರಿಯೆಯಾ ?–ಪ್ರಹ್ಲಾದ ವರದ
ಭೂರಿ ಕೃಪೆಯ ತೋರೆಂದೆನ್ನೆಯಾ ? ॥ ೩೦ ॥

ಮೆಚ್ಚಿ ಕೊಂಡಾಡುವ ಭಕ್ತರಚ್ಯುತನ ದಿವ್ಯ ನಾಮ
ಬಚ್ಚಿಡುತ ಚಿತ್ತದೊಳಗೆ–ಸುಖಿಸುವರದು
ಬಿಚ್ಚು ವಾಕ್ಯ ಧರಣಿಯೊಳಗೆ || ೩೧ ||

ಜನತೆಗೆ ನೀ ಮಾಳ್ಪ ಸೇವೆ ಜನತಾ ಜನಾರ್ದನನ ಸೇವೆ
ತನು ಮನ ಧನಗಳ ತ್ಯಾಗದಿ–ಜಗದೀಶನೊಲಿದು
ಅನುಪಮ ಸುಖವೀವ ಹರುಷದಿ || ೩೨ ||

ಇಂದ್ರ ಚಂದ್ರ ಮುಖ್ಯರೆಲ್ಲ ಇಂದ್ರರು ತಂತಮ್ಮ ಲೋಕ
ಕಿಂದ್ರರಿಗೆ ಇಂದ್ರನೆನಿಸುವ–ಸರ್ವೇಶನಾದು
ಪೇಂದ್ರನ ನೆನೆಯೆಲೊ ಮಾನವ || ೩೩ ||

ಹರಿಯ ನಾಮ ನರನ ಜಿಹ್ವೆಯೆರಡರ ಸಂಬಂಧವಾಗೆ
ಹರಿದು ಮನದೊಳಿಪ್ಪ ಕಲ್ಮಷ–ತೊಳೆಯುತಲಿಹ
ಪರದಿ ಭೋಗವೀವುದನಿಶ || ೩೪ ||

ಕೃಷ್ಣನ ಪೂಜೆಯ ಮಾಡೆ ಕಷ್ಟವೆಲ್ಲ ಪರಿಹಾರ
ಇಷ್ಟಾರ್ಥ ಪೂರ್ಯಿಸುತಿಹನು–ನಿಜ ಭಕ್ತರ ಸಂ
ತುಷ್ಟಿಪಡಿಸಿ ಮೋಕ್ಷವೀವನು || ೩೫ ||

ಕೇಶವಾದಿ ಇಪ್ಪತ್ನಾಲ್ಕು ಶ್ರೀಶನ ನಾಮದ ಪದ್ಯ
ವಾಸೆಯಿಂದ ಪಾಡಿಪೊಗಳುವ–ಸಜ್ಜನರನೆಲ್ಲ
ತೋಷದಿ ರಘುವರ ಕಾಯುವ || ೩೬ ||

## ಐವತ್ತೆರಡನೆಯ ಸಂಧಿ

### (೧) ಅಂತಿಮ ವರದಿ

ದೇಹದಭಿಮಾನ ಹೆಚ್ಚಿ ಗೇಹದ ಮಮತೆ ಹೆಚ್ಚಿ
ಮೋಹ ಸತಿ ಸುತರಲಿ ಹೆಚ್ಚಿ—ಸಜ್ಜನ ಸಾಧು
ಸ್ನೇಹ ಹಾರಿಹೋದುದು ಕೊಚ್ಚಿ ॥ ೧ ॥

ಮಕ್ಕಳು ಮರಿಗಳು ಹುಟ್ಟಿ ಸಕ್ಕರೆ ಕೊಬ್ಬರಿ ಹಂಚಿ
ಅಕ್ಕರೆ ಮಿಗಿಲು ಸಾಕಿದೆ—ಅವರನ್ನೆಲ್ಲೂ
ಇಕ್ಕದೆ ಪೋಷಿಸಿ ಹಿಗ್ಗಿದೆ ॥ ೨ ॥

ಜನಕನು ನಾನೆಂದು ಸುತರನನುದಿನ ಪೋಷಿಸಿದನುಯೆಂದು
ಮನದಲಿ ಹಿಗ್ಗುತ ಕಾಲವ—ತಳ್ಳಿದೆ ಹಿಂದೆ
ಗಣಿಸದೆ ಮತ್ತನ್ಯ ವಿಷಯವ ॥ ೩ ॥

ಬೆಳೆದ ಮಕ್ಕಳಾದಿಯಾಗಿ ನಿಲಯದ ಮನೆಮಂದಿಯೊಳಗೆ
ಸುಳಿಯೆ ರೋಗರುಜಿನ ಮೃತ್ಯುವು—ತಲೆಗಿಟ್ಟು ಕೈಯು
ಹಲುಬಿದೆ ರಕ್ಷಿಸಲು ದೈವವು ॥ ೪ ॥

ಯೌವನದ ಕಾಲದಲಿ ಯಾವಾಗಲೂ ಹೆಣ್ಣ ಚಿಂತೆ
ಹಾವ ಭಾವಗಳಲಿ ತೊಡಗಿದೆ—ಅಪಹಾಸ್ಯಗೈದೆ
ದೇವರ ಗುರು ಹಿರಿಯರ ಮುಂದೆ ॥ ೫ ॥

ಹೊತ್ತು ಕಳೆದ ಪರಿಯ ಕಾಣೆ ಮತ್ತನಾಗಿ ವಿಷಯ ಸುಖದಿ
ಚಿತ್ತಜನೈಯನ ಸ್ಮರಿಸದೆ—ಉನ್ಮತ್ತ ತನದಿ
ಚಿತ್ತಕೆ ಬಂದಂತೆ ನಡೆದೆ ॥ ೬ ॥

ಉತ್ಸವ ಸಂಭ್ರಮ ಹಬ್ಬದುತ್ಸಾಹದಾಚರಣೆಯಲಿ
ಮತ್ಸರ ನನಗೆ ದೈವದಿ !—ನಾ ಕರ್ತೃವೆಂಬ
ಕುತ್ಸಿತ ಬುದ್ಧಿಯ ಮನದಿ ॥ ೭ ॥

ನಡೆವ ಕೆಲಸವೆಡವಿದಾಗ ಕಡುಕೋಪ ಕಂಡವರ ಮೇಲೆ
ಕೆಡುಕು ಯೋಚನೆಗಳು ದುಷ್ಕೃತಿ–ಕಡೆಗೆ ಮಂಕು
ಬಡಿಯೆ ದೈವಕೆ ಶರಣಾಗತಿ ॥ ೮ ॥

ಲಾಭ ಪಡೆದ ಕಾಲದಲ್ಲಿ ಲೋಭ ವರ್ತನೆಯು ದೀನ
ರಾಬಾಲವೃದ್ಧರು ಸತಿಯರ–ಕಂಡರುಪೇಕ್ಷೆ
ನಾ ಬಲ್ಲಿದನೆಂಬ ಮಮಕಾರ ॥ ೯ ॥

ಕಂಡ ಕಂಡ ಕಡೆಗೆ ತಿರುಗಿ ಪುಂಡರೊಡನೆ ಕೂಡಿ ಮೆರೆದು
ಪುಂಡರೀಕಾಕ್ಷನ ಧ್ಯಾನವ–ಮಾಡದೆ ಶುದ್ಧ
ಭಂಡ ಬಾಳ ಬದುಕಿದಂಥವ ! ॥ ೧೦ ॥

ಕಾಲ ಚಕ್ರವುರುಳಿ ಬರಲು ಕಾಲು ತೋಳು ತಲೆಯ ಬಲವು
ಜೋಲು ಬಿದ್ದ ಗಳಿಗೆಯಿಂದಲಿ–ಗರ್ವವು ಮುರಿದು
ಮೂಲೆಗೊರಗಿ ಕೋಲ ಕೈಯಲಿ ॥ ೧೧ ॥

ಶಕ್ತಿಗುಂದಿ ದೇಹದಲ್ಲಿ ಯುಕ್ತಿಯಳಿದು ಮೆದುಳಿನಲ್ಲಿ
ರಕ್ತಿ ವಿಷಯಗಳಲಿ ರಾಗವು–ಮಾಯವಾಗಿ ವಿ
ರಕ್ತಿ ಭಕ್ತಿ ತಾವೇ ಬಂದವು ! ॥ ೧೨ ॥

ಏಳಲಿಕ್ಕೆ ತ್ರಾಣವಿಲ್ಲ ! ಹೇಳಲಿಕ್ಕೆ ಬಾಯೇ ಇಲ್ಲ
ಬಾಳ ನಡೆಸಿ ಸಾಕಾಯಿತಲ್ಲ !–ಇಂತಾಗಿ ನನಗೆ
ಮೂಲೆಯೊಳಗೆ ಮುಪ್ಪಾಯಿತಲ್ಲ ! ॥ ೧೩ ॥

ಈ ಪರಿಯಿಂದಲಿ ಜಗದಿ ಶ್ರೀಪತಿಯ ಸೇವಿಸದೆ
ಕಾಪುರುಷನಂತೆ ನಟಿಸಿದೆ !–ಸಜ್ಜನರಿಂದ
ಕೋಪ ಶಾಪ ತಾಪಕೊಳಗಾದೆ ! ॥ ೧೪ ॥

## (೨) ಸಾಧು ಸಂತರ ಸಂಗ

ದೇವನೇ ಕಣ್ಮುಂದೆ ತೋರ್ಪ ಧ್ಯಾನ ಸಮಾಧಿಯಲಿ ಸಾಹಿ
ತ್ಯಾವಲೋಕನದ ಮಾರ್ಗದಿ !—ನಲಿಯುತ ಮಹಿ
ಮಾವಲಂಬರಿಹರು ಲೋಕದಿ ॥ ೧೫ ॥

ನಾನಾ ಕಾರಣಂಗಳಿಂದ ನಾನಾ ದೇಶ ಸ್ಥಳಗಳಲ್ಲಿ
ನಾನಾ ಕಾಲ ಸನ್ನಿವೇಶದಿ—ಸಜ್ಜನ ಸಂಗ
ತಾನೊದಗುತಿಹುದು ಲೋಕದಿ ! ॥ ೧೬ ॥

ಕುಶಲ ಕಲೆಗಳಲ್ಲಿ ರತರು ಕಾವ್ಯ ಕವಿವರ್ಗಗಳು ಪರರ
ಕುಶಲ ತಮ್ಮ ಕುಶಲವೆಂಬರು—ಸಹೃದಯರು ಜೀವ
ಸದೃಶ ಸದ್ಗುಣಿಗಳಿರ್ಪರು ! ॥ ೧೭ ॥

ಗಾನಯೋಗದಿಂದ ಸ್ವರಸಾನುಭವ ಪೂರ್ವಕದ
ನಾನುರಾಗದಿಂದ ದೈವವ—ಮೆಚ್ಚಿಸುವ ಮ
ಹಾನುಭಾವರಿಹರೋ ಮಾನವ ! ॥ ೧೮ ॥

ಬೇರೆ ಬೇರೆ ಅಂಗಗಳು ಬೇರೆ ಬೇರೆ ಕೆಲಸ ಮಾಡಿ
ಸೇರಿ ಶರೀರದೊಳಿರ್ಪಂತೆ—ಒಮ್ಮತದಿ ನರನ
ಕೋರಿದಿಷ್ಟ ಕರ್ಮ ಮಾಳ್ಪಂತೆ ॥ ೧೯ ॥

ಸಣ್ಣ ಪುಟ್ಟ ಹಳ್ಳಿ ಗ್ರಾಮ ಬಣ್ಣದ ಪಟ್ಟಣ ಪ್ರಾಂತ್ಯ
ಗಣ್ಯವೆನಿಸಿ ದೇಶವೆನಿಪಂತೆ !—ಸಂಘಟಿತವಾಗಿ
ತನ್ನ ರಾಜ್ಯ ತಾನೇ ಆಳ್ವಂತೆ ॥ ೨೦ ॥

ಹಲವು ಹಳ್ಳ ನದಿ ಸಮುದ್ರ ಹಲವು ಗುಡ್ಡ ಬೆಟ್ಟ ಕಾಡು
ಹಲವು ಬಯಲು ಗದ್ದೆ ಹೊಲ ತೋಟ—ಪಶು ಪಕ್ಷಿ ಮೃಗ
ಹಲವು ಸೇರಿ ಜಗದ ಸವಿನೋಟ ! ॥ ೨೧ ॥

ಹಲವು ಹತ್ತು ದಿಕ್ಕಿನಿಂದ ಹಲವಾರು ಸಾವಿರ ಜನ
ಕಲೆವ ತೆರದಿ ತೀರ್ಥಕ್ಷೇತ್ರದಿ–ಮಾನವರು ತಮ್ಮ
ನೆಲೆಗಾಂಬರು ವಿವಿಧ ಮಾರ್ಗದಿ || ೨೨ ||

ಅವರವರ ಮಾರ್ಗದಿ ಜೀವರವನಿಯೊಳು ಬದುಕಿನಲಿ
ವಿವಿಧ ಮುಖದಿ ಸಿಷ್ಕಾಮರಾಗಿ -ಸೇವೆಯ ಮಾಡ
ಲವರಿಗೊಲಿವ ದೈವ ತಾನಾಗಿ || ೨೩ ||

ತಿಳಿಯಬೇಕಾಪುದನು ಮರತು ತಿಳಿಯಬಾರದುದನು ಕಲಿತು
ತಿಳಿದು ಮಾಳ್ಪ ಸತ್ಕರ್ಮವ ಬಿಟ್ಟು–ಹೋಗುವುದು ಸರಿಯೆ ?
ತಿಳಿಯೆ ಹರಿಯ ತಿಳಿವುದೇ ಗುಟ್ಟು ! || ೨೪ ||

## (೩) ಉಪರ್ಣಣಾ ಮನೋಭಾವ

ಆವುದಾಯಿತಿನ್ನಾದರೂ ಮಾಧವನೇ ಗತಿಯೆಂದು
ಖೇಟ ಬುದ್ಧಿ ಬಿಟ್ಟು ಮುಂದಕೆ–ಸನ್ಮಾರ್ಗದಲ್ಲಿ
ಹೋದರದುವೆ ಬಾರಿ ಸೌಖ್ಯಕೆ || ೨೫ ||

ಸಾಧನ ಸಂಪದಂಗಳ ಸಾಪರದಿಂದಲಿ ತನ್ನ
ಸ್ವಾಧೀನಕೆ ತಂದುಕೊಳ್ಳುತ–ಬಾಳಿನ ಗುರಿ
ಮಾದರಿ ಲೋಕಕೆ ತೋರುತ || ೨೬ ||

ಯಾವ ದೇವನಾದರೇನು ಕಾವ ನಮ್ಮನೆಂದು ನಂಬಿ
ಸಾವ ಮುನ್ನ ಪುಣ್ಯ ಕಾರ್ಯವ–ಮಾಡೆಲೊ ಜೀವ
ಶ್ರೀವರನು ಮೆಚ್ಚಿ ಪೊರೆಯುವ || ೨೭ ||

ಭಕ್ತ ಜನರನುಭವ ಸಚ್ಚರಿತ್ರೆ ಕೇಳ್ವ ಬುದ್ಧಿ
ಭಕ್ತಿ ದೇವನಲಿ ಮಾಡೆಲೊ !–ಶ್ರದ್ಧೆಯು ಕರ್ಮಾ
ಸಕ್ತಿಗಳಲಿ ಮನವ ನಿಲಿಸಲೊ ! || ೨೮ ||

ಈ ಸಚರಾಚರಲೋಕವೀಶ್ವರನಾಧೀನವೆಂದು
ದಾಸಕೋಟಿಯೊಳಗೆ ತಾನೆಂದು–ತಿಳಿಯುವ ನರ
ಲೇಸುಗಳನೆ ಪಡೆವನೆಂದೆಂದು ॥ ೨೯ ॥

ತಾನು ಗೈವ ಕಾರ್ಯಗಳದೇನುಂಟೆಲ್ಲವನು ದೇವ
ಸಾನುಗ್ರಹದಿಂದ ತನಗೆ–ನೀಡಿಹನೆಂಬ
ಜ್ಞಾನದಿಂದ ನಡೆಯುವಾತಗೆ ॥ ೩೦ ॥

ಮೃತ್ಯು ಭಯವೆಲ್ಲಿಯದು ಕರ್ತವ್ಯ ನಿಷ್ಠೆಯೊಳಿಹ
ಸತ್ಯವಂತ ಸುಗುಣ ಶೀಲಗೆ–ದೇವನ ನಂಬಿ
ದತ್ಯಧಿಕ ಪುಣ್ಯಶಾಲಿಗೆ ॥ ೩೧ ॥

ಪರರಿಗಾಗಿ ಬದುಕುವುದೆ ನರನ ಬಾಳ್ಗೆ ಸಾರ್ಥಕವೆಂ
ದರಿತವಗೆ ಸರ್ವಸೌಖ್ಯವು–ಲಭಿಸಿ ಪರವು
ಪುರುಷನೊಲಿವನವಗೆ ಸತ್ಯವು ॥ ೩೨ ॥

ನಿನ್ನ ನೀನು ಮರೆಯಬೇಡ ಅನ್ಯರನೂ ತೊರೆಯ ಬೇಡ
ನಿನ್ನ ನಂಬಿದವರ ಬಿಡಬೇಡ–ರಘುವರನ ಪಾದ
ವನ್ನೆಂದಿಗೂ ಮರೆಯಲೇಬೇಡ ! ॥ ೩೩ ॥

ಮಾನವ ನೀನಿದನು ತಿಳಿದು ಸಾನುರಾಗದಿ ಭಕ್ತರ
ಜ್ಞಾನೋಪದೇಶಗಳ ತತ್ವವ–ಮನನಗೈದು
ಜಾಣನೆನಿಸಿ ಕಳೆವುದೀ ಭವ ॥ ೩೪ ॥

ಭಕ್ತಿವಂತನಾದಮೇಲೆ ಶಕ್ತಿ ಬೇರೆಯೇತಕವಗೆ ?
ಶಕ್ತ ಶ್ರೀ ಪುರುಷೋತ್ತಮನನು–ನಂಬಿಹ ಸುಮತಿ
ಯುಕ್ತಿಯಿಂದೀ ಭವವ ಗೆಲುವನು ॥ ೩೫ ॥

ಬಿಡನು ಭಕ್ತನೆಂದೆಂದಿಗೂ ಒಡೆಯನ ಶ್ರೀಪಾದಪದ್ಮ
ಬಿಡನು ಸತ್ಯ ಧರ್ಮ ನಿಷ್ಠೆಯ–ಗುರುಪಾದ ಸೇವೆ
ಬಿಡನು ಸಾಧು ಸುಜನ ಗೋಷ್ಠಿಯ ॥ ೩೬ ॥

ಸತ್ಯ ದರ್ಶನವ ಪಡೆಯಲತ್ಯುತ್ಸಾಹದಿಂದ ತನ್ನ
ನಿತ್ಯ ನಿಯತ ಕರ್ಮವೆಸಗುವ–ದುಷ್ಕರನು ತೋರಿವ
ಮೃತ್ಯುವಿಗೆ ಹೆದರದಿರುವ || ೩೭ ||

ದುಷ್ಟನಂತೆ ಹರವಮಾಡಿ ಶಿಷ್ಟನು ತಾನಾಗಬೇಕು
ಶ್ರೇಷ್ಠ ಗುರಿಯನ್ನು ಸಾಧಿಸೆ !–ಸ್ವಕರ್ಮದಿಂದ
ಭ್ರಷ್ಟನಾಗದಂತೆ ಜೀವಿಸೆ || ೩೮ ||

ಹಿರಿಯರನುಭವಗಳನು ಸ್ಮರಿಸಿಕೊಂಡು ಶುದ್ಧ ಮನದಿ
ನಿರುತ ದೇಶ ಭಾಷೆ ಜನಗಳ–ಹಿತಕಾಗಿ ಶ್ರಮಿಸೆ
ಪರಮೇಶ್ವರ ಕೊಡುವ ಸುಖಗಳ || ೩೯ ||

## ಐವತ್ತ ಮೂರನೆಯ ಸಂಧಿ

### ಫಲಸ್ತುತಿ

ದೇವ ದೇವೇಶಾದಿವಂದ್ಯ ಭಾವಜನ್ನೈಯ್ಯ ಕೃಪಾಳು
ಪಾಪನಾಶಿ ಪ್ರಭುವೆ ಕೇಳೆಮ್ಮ–ನೊರೆಯುಸು ನಿನ್ನ
ಬಾಲ ಭಕ್ತಿಯಿತ್ತು ಪೊರೆಯೆಮ್ಮ ॥ ೧ ॥

ನಿರತಿಶಯ ಭಕ್ತಿ ಜ್ಞಾನ ಪರಮ ಸಂಪದಂಗಳೀವ
ಸಿರಿದೇವಿಯೆಮ್ಮನು ಮುದದಲಿ–ಸಂರಕ್ಷಿಸಲಿ
ಧರೆಯ ಭಕ್ತ ಜನರ ಕೃಪೆಯಲಿ ॥ ೨ ॥

ಹರಿಯ ಚರಣ ಸರಸಿಜದ ಪರಿಮಳವ ಸೇವಿಸುವ
ಶರಿಯ ಸ್ಮರಣೆ ಭಜನೆಗೈಯುವ–ಗುರುರಾಯನೆಮ್ಮ
ದುರಿತರಾಶಿ ಶರಿದು ಪೊರೆಯುವ ॥ ೩ ॥

ಬೇರೆ ಯಾರನಾಲಿಸಲೆಂದು ಸಾರುತಿಲ್ಲವಿದನು ನಾನು
ಸಾರಸಾಕ್ಷನಂಘ್ರಿ ಭಜನೆಯ–ಮಾಡಿರಿಯೆಂದು
ಕೋರುವೆನು ಮನುಜ ಕೋಟಿಯ ! ॥ ೪ ॥

ನಿನ್ನ ಲೀಲೆ ನಿನ್ನ ಇಚ್ಛೆ ನಿನ್ನ ಆಜ್ಞೆಯಂತೆ ಜಗವು
ನಿನ್ನ ಕೈಗೊಂಬೆಗಳು ನಾವಯ್ಯ–ಎಂದಿಗೂ ನಾವು
ನಿನ್ನ ದಾಸರೆಂದು ತಿಳಿಯಯ್ಯ ॥ ೫ ॥

ಭಾರತದ ಕೋಟಿ ಕೋಟಿ ವೀರ ಪ್ರಜೆಗಳುನ್ನತಿಗೆ
ಭಾರತೀಕಾಂತನ ಕಾಂತನೆ–ಪ್ರಾರ್ಥಿಪೆ ನಿನ್ನ
ಭಾರತೀಯರೆಮ್ಮ ಪೊರೆಯೆನೆ ॥ ೬ ॥

ಕೇಶವಶರ್ಮನ ಸುತ ಕಾಶ್ಯಪ ಗೋತ್ರಜನಿದ
ನಾಶುಕವಿತೆಯಾಗಿ ಬರದನು–ಈ 'ಕಲಿಪದ'ವ
ತೋಷದಿಂದ ರಾಘವೇಂದ್ರನು ॥ ೭ ॥

ಮಾಡಿದವರುಗಳ ಪಾಪ ಆಡಿದವರಿಗೆ ಎಂಬ
ರೂಢಿ ಮಾತು ಸೋಕಬಾರದು–ಕ್ಷಮೆಯ ಬೇಡಿ
ರೂಢಿಗೊಡೆಯನಂಘ್ರಿ ಸ್ಮರಿಪುದು ॥ ೮ ॥

ಲೋಕದ ಸುಕ್ಷೇಮ ಬಯಸಿ ಟೀಕೆಗಳು ಬಂದುವಿಲ್ಲಿ
ಬೇಕೆಂದೇನೂ ಬರೆಯದಲ್ಲವು—ನಮ್ಮಯ ನಾಡ
ಜೋಕೆಗಾಗಿ ಹೇಳ್ದ ವಚನವು ॥ ೯ ॥

ಕಾವ್ಯವೇನಲ್ಲವಿದು ನಿಜ ಕಾವ್ಯ ಗುಣದಿ ಕೂಡಿರ್ದ ಸಂ
ನವ್ಯವೆನಿಸದಿರದು ಬುಧರಿಗೆ—ಸಹೃದಯರಿಗೆ
ಶ್ರಾವ್ಯವಹುದು ಭಾವುಕರಿಗೆ ॥ ೧೦ ॥

ಲೋಕ ಕಲ್ಯಾಣವನು ಬಯಸಿ ವ್ಯಾಕುಲವ ಕಳೆಯೆ ಹೇಳ್ದ
ಲೋಕ ಧರ್ಮ ನೀತಿಗಳ ಸಾರ—ಕಲಿಪದವಿದು
ಲೋಕ ಜನಕೆ ಮಂಗಳಕರ ॥ ೧೧ ॥

ಮಂಗಳವಾಗಲಿ ನಿನ್ನ ಡಿಂಗರಿಗರಿಗೆ ದೇವ
ಮಂಗಳವಾಗಲಿ ಧರಣಿಗೆ—ಭಾರತಾಂಬೆಗೆ
ಮಂಗಳ ಕನ್ನಡ ನಾಡಿಗೆ ॥ ೧೨ ॥

ಮಂಗಳವೆನ್ನಯ ಹೃದಯದಂಗಣದಿ ನಿಲ್ಲುತ ಪ
ದಂಗಳನು ನುಡಿಸಿದಾತಗೆ—ಶ್ರೀ ರಘುವರಗೆ
ಮಂಗಳ ಗುರು ರಾಘವೇಂದ್ರಗೆ ॥ ೧೩ ॥

ನವವೃಂದಾವನಾಂತರ್ಗತ ನವಯತೀಂದ್ರ ಹೃದಯವಾಸ
ಪವಮಾನಾಂತರ್ಯಾಮಿ ರಘುವರ—ರಕ್ಷಿಸಲಿ ಸುಜನ
ನಿವಹವನಾಚಂದ್ರಾರ್ಕತಾರ ॥ ೧೪ ॥

ಸಾರಪದಗಳೀ ಕಾವ್ಯದೊಳೆಂಟುನೂರೆಂಭತ್ತೊಂಭತ್ತು
ಶ್ರೀರಘುವರನಂಘ್ರಿ ಕಮಲದಿ—ಸಮರ್ಪಿತವು
ಮಾರುತಿಯ ಸುಪ್ರಸಾದದಿ ॥ ೧೫ ॥

ಸಂಧಿ ೫೩, ಪದ್ಯಗಳು ೮೮೯ ಕ್ಕೆ ಮಂಗಳಮಸ್ತು

॥ ಶ್ರೀ ಕೃಷ್ಣಾರ್ಪಣಮಸ್ತು ॥

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪದ್ಯ | ಸಾಲು | ತಪ್ಪು | ಒಪ್ಪು |
|---|---|---|---|---|
| 14 | 13 | 2 | ಬಾಳನ | ಬಾಳನು |
| 32 | 6 | 2 | ಪ್ರಕೃತಿ ಯಾಕೆ | ಪ್ರಕೃತಿಯಾಕೆ |
| 34 | 1 | 1 | ಜನರೊಳನೇಕಪರಿ | ಮನುಜರೊಳನೇಕಪರಿ |
| 34 | 2 | 2 | ಶ್ಲೋಕ ಪುಣ್ಯರೊರೆದ | ಶ್ಲೋಕಪುಣ್ಯತೊರೆದ |
| 35 | 8 | 2 | ದಿನವಕಳೆವರು | ದಿನವ ಕಳೆವರು |
| 39 | 13 | 2 | ವನಜಸಾಭನ | ವನರುಹನಾಭನ |
| 47 | 9 | 3 | ವೇದ್ಯಕಲ್ಲ | ವೇದ್ಯಕಿಲ್ಲ |
| 47 | 12 | 2 | ದುಡಿಯುತಿದ್ದರೂ | ದುಡಿಯುತಿದ್ದರು |
| 49 | 2 | 2 | ಕಾಮರತಿಯರ | ಕಾಮ ರತಿಯರ |
| 59 | 3 | 2 | ಶೂನ್ಯರಮಮಃ | ಶೂನ್ಯರಮಮ |
| 61 | 6 | 2 | ಮಹಸೀಯರೆನಿಬರೊಪುಟ್ಟಿತ | ಮಹಸೀಯರೆನಿಬರೊ ಪುಟ್ಟಿತ |
| 68 | 12 | 1 | ಜನರತನಕ | ಜನರ ತನಕ |
| 82 | 16 | 3 | ಸುಖಗಳನುಣುವರು | ಸುಖಗಳನುಣ್ಣುವರು |
| 85 | 5 | 1 | ಕುನ್ನಿಮಾನವನು | ಕುನ್ನಿಮಾನವನ |
| 94 | 20 | 1 | ಮಾತುಗಳಾಡಿ | ಮಾತನಾಡಿ |
| 96 | 3 | 2 | ಕಡೆ | ಕಡೆ– |
| 97 | 11 | 2 | ಸಜ್ಜನತಿರೆಗೆ | ಸಜ್ಜನತತಿಗೆ |
| 106 | 7 | 1 | ಅಸಮಾಧಾನವಸಮ ಚಿತ್ತ | ಅಸಮಾಧಾನವಸಮಚಿತ್ತ |
| 114 | 13 | 3 | ಮೆರೆದುದ | ಮೆರೆದುದ |
| 130 | 2[illegible] | | [illegible]ವೇನೂ | ಮಿಗಿಲಲ್ಲವೇನೊ |